# ಸಮರ್ಪಣೆ

ಹೊಸಗನ್ನಡದ ಸಿರಿಕವಿ

**'ಶ್ರೀನಿವಾಸ'ರಿಗೆ**

ಪೊಡಮಡುವೆಂ ಕೃತಿಮಾಲೆಯ-
ನಡಿಗಿಡುವೆಂ ಪಡೆವೆನಿದರಿನಾತ್ಮೋನ್ನತಿಯಂ.
ನುಡಿಹುಡಿ ಹೊನ್ನಾಯ್ತೆನುವೆಂ
ಮುಡಿಪಂ ನೀವೊಪ್ಪಿಕೊಂಡು ಹರಸಿದ ಕತದಿಂ.

ಗಿರಿಯೆತ್ತರವೇರಿದನೆ-
ತ್ತರವೆಂತಂತುನ್ನತಾತ್ಮರಾಸರೆಯಿಂದಂ
ಕಿರಿದಕ್ಕುನ್ನತಿ, ಸಿರಿಕವಿ
ಮರೆವೆನೆ ಹಿರಿಯಣ್ಣನಂತೆ ಕೃಪೆ ತೋರಿಹುದಂ!

# ಅರಿಕೆ

ನನ್ನ ಗೀತರೂಪಕಗಳೆರಡು ಪುಸ್ತಕರೂಪದಲ್ಲಿ ಹೊರತೋರಿದ ಒಂದೆರಡು ತಿಂಗಳಲ್ಲಿಯೇ ಈ ಕವನಸಂಗ್ರಹವೂ ಪ್ರಕಟವಾಗುವ ಸುಯೋಗವೊದಗಿರುವುದರಿಂದ ನನಗೆ ಯಾವುದೊ ದುರಿತಕ್ಷಯವಾದಷ್ಟು ಸಂತೋಷವಾಗಿದೆ. ಈ ನಲವನ್ನು ನನಗೆ ಕೊಟ್ಟಿರುವ ಸನ್ಮಿತ್ರ ಕೂಡಲಿ ಚಿದಂಬರಂ ಅವರಿಗೆ ನಾನೆಷ್ಟು ನೆನಕೆಗಳನ್ನು ಸಲ್ಲಿಸಿದರೂ ತೀರದು.

ಈ ಸಂಗ್ರಹದ ಹಲವು ಕವನಗಳು 'ಪ್ರಬುದ್ಧ ಕರ್ಣಾಟಕ', 'ವಿಚಾರವಾಹಿನಿ'—ಈ ಪತ್ರಿಕೆಗಳಲ್ಲಿ ಆಗಾಗ ಅಚ್ಚಾಗಿದ್ದುವು. 'ನಾಕಾಣೆ' ಎಂಬುದು 'ಜಯಂತಿ'ಯ ವಾರ್ಷಿಕ ಸಂಚಿಕೆಯೊಂದರಲ್ಲಿಯೂ, 'ಕೆನ್ಸಿಂಗ್‌ಟನ್ ಪಾರ್ಕ್' ಎಂಬುದು ನನ್ನ ಮಿತ್ರ ಗೋಪಾಲಕೃಷ್ಣರಾಯರ ಪ್ರಸಿದ್ಧವಾದ ಪ್ರಬಂಧಸಂಗ್ರಹದಲ್ಲಿಯೂ ಆಸರೆ ಪಡೆದುವು. ಇದುವರೆಗೆ ಅಚ್ಚಾಗದೆ ಇರುವ ಕೆಲವು ಪದ್ಯಗಳೂ ಇಲ್ಲಿವೆ. ಮೂರು ನಾಲ್ಕು ಲಘುಗೀತಗಳನ್ನು ಬಿಟ್ಟರೆ ಮಿಕ್ಕವೆಲ್ಲಾ ಕಳೆದ ಏಳೆಂಟು ವರ್ಷಗಳಲ್ಲಿ ನಾನು ಪಟ್ಟ ತೀವ್ರಾನುಭವಗಳನ್ನು ರೇಖಿಸಿವೆ. ಆನಂದಗಾಮಿಯಾದ ವಿಶ್ವಚೈತನ್ಯವು ನನ್ನ ಬಾಳಿನಲ್ಲಿ ಪಡುವ ಬಗೆಬಗೆಯ ಸಂವೇದನೆಗಳು ಅಂದು ಎದೆಯಲ್ಲಿ ಮಿಡಿದಂತೆ ನುಡಿಯಲ್ಲಿ ನಡೆಗೊಂಡು ಸಹೃದಯ ಹೃದಯಾಶ್ರಯಕ್ಕಾಗಿ ಹೊರಟಿವೆ.

ದೀರ್ಘಚಿಂತನೆಯಿಂದ ಹರಳುಗಟ್ಟಿರುವುದರಿಂದಲೋ, ನುಡಿಗೊಡುವ ಕಲೆಯಲ್ಲಿ ನ್ಯೂನತೆಯಿರುವುದರಿಂದಲೋ, ಛಂದಸ್ಸಿನ ಇಕ್ಕಟ್ಟಿನಿಂದಲೋ ಇರಬಹುದು, ಭಾವವೇ ನನಗೆ ಅಸ್ಪಷ್ಟವಾಗಿ ತೋರಿರುವುದರಿಂದಲೋ, ಈ ಕವನಗಳನ್ನು ಓದಿಸಿ ಕೇಳಿದ ನನ್ನ ಮಿತ್ರರಿಗೆ ಕೆಲವೆಡೆಗಳಲ್ಲಿ ಅವುಗಳ ಭಾವಗ್ರಹಣ ಕಷ್ಟವಾಗಿ ತೋರಿಬಂದಿತು. ಸ್ವಲ್ಪ ವ್ಯಾಖ್ಯಾನ ಬೇಕೆಂದರು. "ಮಳೆರಾಯು" ಎಂಬ ಪದ್ಯದಲ್ಲಿ ಬರುವ 'ನೋವನ ತೆಪ್ಪ' ಎಂಬುದು ಬೈಬಲ್ಲಿನಲ್ಲಿ ಬರುವ, ಪ್ರಳಯಕಾಲದಲ್ಲಿ ಮುಳುಗದೆ ನಿಂತ, 'Noah's arc'; ಮನೆ ಈ ತೆಪ್ಪದಂತಿತ್ತು ಎಂದು ಭಾವ. "ದಾರಿಯಲ್ಲಿ" ಎಂಬ ಕವನದಲ್ಲಿ ಈ ಸಾಲು ಬರುತ್ತದೆ: 'ಲಿಯರಂದದಿ ಮೊರೆಯಿಡುತಿಹ ಬರಿಯೇ'. ಕೈಯಲ್ಲಿದ್ದುದನ್ನು ಮಂಕುತನದಿಂದ ಕೊಟ್ಟುಬಿಟ್ಟು ಷೇಕ್ಸ್‌ಪಿಯರಿನ ನಾಟಕದ ದೊರೆ 'ಲಿಯರ್' ಮೊರೆದಂತೆ ವಿಧಿಯನ್ನು ಬೈಯುತ್ತಾ ಕಂಡ

ಕಂಡವರನ್ನು ದೇಹಿ ಎಂದು ಬೇಡಿಕೊಳ್ಳುತ್ತಾ ಕಾರ್ಪಣ್ಯಪಡುವ ನಮ್ಮ ಜನರ ಪಾಡನ್ನು ಕುರಿತು ಹೇಳಿದ ಮಾತಿದು. "ಶಾರದ ಯಾಮಿನಿ" ಎಂಬುದು ಬರಿ ರಾತ್ರಿಯನ್ನು ಕುರಿತು ಬರೆದ ಗೀತವಲ್ಲ. ಅದುರಿನಲ್ಲಿರುವ ಸ್ವರ್ಣಲೇಖೆಯಂತೆ ಕತ್ತಲಿನ ಮಧ್ಯದಲ್ಲಿ ಹೊಳೆವ ಜ್ಯೋತಿರ್ಲೇಖೆಯ ಚೆಲುವನ್ನು ಕುರಿತದ್ದಿದು. ಈ ಜ್ಯೋತಿಯ ಚೆಲುವಿನ ಬಗೆಬಗೆಯ ಹೊಳಹನ್ನು ನಾನು ಇರುಳೆನ್ನದೆ ಹಗಲೆನ್ನದೆ ಈ ಪದ್ಯದಲ್ಲಿ ವರ್ಣಿಸಿದೇನೆ. "ಪಯಣಿಗರ ಹಾಡಿ"ನಲ್ಲಿ ಬರುವ ಸಾಗರದ ಚಿತ್ರ ಇನ್ನೂ ಹೆಚ್ಚು ಸ್ಫುಟವಾಗಬಹುದಾಗಿತ್ತು. 'ಹರಳು-ನೀರು' ಎಂದರೆ ಹರಳಿನಂತೆ ಹೊಳೆವ ನೀರು. ಸಾಗರದ ಅತಿ ಮನೋಹರವಾದ ಸ್ವಚ್ಛ ಮರಕತದ ಹೊಳಹನ್ನು ನೆನೆದು ಹೇಳಿದ ಮಾತಿದು. ಅತ್ಯಂತ ಪುರಾತನವಾದ ಈ ನೀರು ಹೀಗೆ ಆಗತಾನೆ ಸೃಷ್ಟವಾದಷ್ಟು ನವೋನವವಾಗಿ ಕಾಣುವುದು ಸಹಜವಾಗಿ ಬೆರಗನ್ನುಂಟುಮಾಡುತ್ತದೆ — ಮತ್ತು, ಕಡಲನ್ನು ಮೊದಲನೆಯ ಬಾರಿ ಕಂಡವರಿಗೆ ಒಂದು ಬಗೆಯ ಅತೃಪ್ತಿಯುಂಟಾಗುತ್ತದೆ—ತಾವು ಬಯಸಿದ್ದಷ್ಟು ವಿಸ್ತಾರವಾಗಿ ಅದು ಕಾಣುವುದಿಲ್ಲವೆಂದು. ದೂರದಲ್ಲಿ ನೀರುಬ್ಬಿ ಬಾನು ಕವಿದು ಒಂದು ಕೃತಕವಾದ ಮೇರೆ ನಿರ್ಮಿತವಾಗಿ ನಮ್ಮ ದೃಷ್ಟಿಯನ್ನೂ ಆಸೆಯನ್ನೂ ತಡೆದು ನಿಲ್ಲಿಸುವುದರಿಂದ ಈ ವಿಫಲ ಮನೋರಥ ಭಾವವುಂಟಾಗುತ್ತದೆ. ನಮ್ಮನ್ನು ಎಲ್ಲ ರೀತಿಗಳಲ್ಲಿಯೂ ತಣಿಸುವ ಈ ಕಡಲು ನಮ್ಮಲ್ಲಿರುವ ಆನಂತ್ಯದ ಒಂದಾಸೆಯನ್ನಾದರೂ ತೀರಿಸದೆ ನಮ ಗುಳಿಸಲಿ ಎಂದು ಬಾನು ಈ ರೀತಿ ಕರುಣೆಯಿಂದ ದೃಷ್ಟಿಗೆ ಎಲ್ಲೆಕಟ್ಟಿದೆ ಎಂಬುದಾಗಿ ಪ್ರಕೃತಿಯ ಈ 'ದುರ್ಗುಣ'ವನ್ನು ಗುಣವನ್ನಾಗಿ ಕಲ್ಪಿಸಿ ಬರೆದಿದೇನೆ. "ಬೆಳುದಿಂಗಳಿನ ಹಾಡಿ"ನಲ್ಲಿ ಈ ಮಾತು ಬರುತ್ತದೆ: 'ಕವಿಗಳ ಮಾತೊಳು ಹುರುಳೆನಿತು, ಇದಕೂ ತೋರುವ ಮರುಳಿನಿತು' ಎಂದು. ಇಲ್ಲಿ ನನ್ನ ಉದ್ದೇಶ ನಿಂದೆಯೂ ಅಲ್ಲ, ಸ್ತುತಿಯೂ ಅಲ್ಲ. ಕಾವ್ಯದಲ್ಲಿ ಹುರುಳಿಗಿಂತ ಮರುಳು, ಬುದ್ಧಿಯ ಪ್ರಚೋದನಕ್ಕಿಂತ ಹೃದಯದ ಪ್ರಚೋದನ, ತಿಳಿವಿಗಿಂತ ನಲವು ಹೆಚ್ಚಾಗಿ ವ್ಯಕ್ತವಾಗುತ್ತದೆ. ನಲವು ಮುಖ್ಯಫಲ, ತಿಳಿವು ಅವಾಂತರಫಲ; ಲೋಕದ ತೀವ್ರಾನುಭವಗಳೆಲ್ಲಾ ಕವಿಹೃದಯ ಪ್ರತಿಫಲನದಿಂದ ತಂಪುವೆತ್ತು ಆಹ್ಲಾದದಾಯಕವಾಗುತ್ತವೆ ಎಂದು ಹೇಳುವುದು, ಅಷ್ಟೆ. ಮೇಲೆ ಹೇಳಿದ ಸಂದರ್ಭಗಳಲ್ಲದೆ ಇನ್ನೂ ಇತರ ಕಡೆಗಳಲ್ಲಿ ಅಸ್ಪಷ್ಟಾರ್ಥ ದೋಷಗಳುಳಿದಿರಬಹುದು. ಈ ಕುಂದುಗಳನ್ನು ಸಹೃದಯರ ಸಹನೆಗೊಪ್ಪಿಸುವುದು ಯುಕ್ತಿ.

ಇನ್ನು ನನಗುಳಿದಿರುವುದು ಭಾರಸಮರ್ಪಣ. ಈ ಕಾಲದಲ್ಲಿ ಪದ್ಯ ಜನಕ್ಕೆ ಸೇರದೆಂದು ಪ್ರತೀತಿ. ಹೊಸಗನ್ನಡದಲ್ಲಿ ಪದ್ಯ ಬೆಳೆದಷ್ಟು ಗದ್ಯ ಬೆಳೆದಿಲ್ಲವೆಂಬ ಆಕ್ಷೇಪಣೆ ಬೇರೆ. ಇಂಥ ಸಂದರ್ಭದಲ್ಲಿ ಈ ಪದ್ಯಗಳನ್ನು ಒಂದುಗೂಡಿಸಿ ಅಚ್ಚುಹಾಕಿಸಬೇಕೆಂಬ ಬಯಕೆ ಮನದಲ್ಲಿದ್ದರೂ ಅದನ್ನು ಬಯ ಲಿಡುವಷ್ಟು ಧೈರ್ಯ ನನಗಿರಲಿಲ್ಲ. ಗೆಳೆಯ ತೀ. ನಂ. ಶ್ರೀಯವರ 'ನೈತಿಕ' ಬೆಂಬಲ, 'ಕಾವ್ಯಾಲಯ'ದ ಆರ್ಥಿಕ ಬೆಂಬಲ, ಇವುಗಳಿಂದ ಈ ಕಾರ್‍ಯಸಾಧ್ಯವಾಯಿತೆನ್ನಬೇಕು. ಕೆಲಸ ತೆಂಗಾಳಿಯದು, ಸುಗ್ಗಿಯದು, ಮರಕ್ಕೆ ಕುಸುಮೋತ್ಸವ. ಈ ಪ್ರಕಟನೆಯ ಔಚಿತ್ಯ ಅನೌಚಿತ್ಯಗಳಿಗೆ ಈ ಗೆಳೆಯರೇ ಹೊಣೆ. ಈ ಸಲ ಕರಡುಗಳನ್ನು ತಿದ್ದುವ ಭಾರ ಶ್ರೀ ಡಿ. ಎಲ್. ನರಸಿಂಹಾಚಾರ್‍ಯ ಮತ್ತು ಶ್ರೀ ಚಿದಂಬರಂ ಇವರ ಮೇಲೆ ಬಿದ್ದಿದೆ. ಆದುದರಿಂದ ಮುದ್ರಣದ ಅಂದ ಚಂದ ಗುಣದೋಷಗಳ ಜವಾಬುದಾರಿ ಈ ಪ್ರಿಯ ಮಿತ್ರರದಾಗಿದೆ. ಹೀಗೆ ಈ ಪುಸ್ತಕದ ಪ್ರಕಟನೆಯ ಕ್ಲೇಶದ ಬಹುಭಾಗವನ್ನು ನನ್ನ ಮಿತ್ರರ ವಿಶ್ವಾಸಕ್ಕೆ ವಹಿಸಿ, ಇನ್ನೂ ಇವು ನನ್ನವು ಎಂಬ ಅಭಿಮಾನವನ್ನು ನನ್ನಲ್ಲಿ ವಿಶೇಷವಾದ ಪ್ರೇಮ ತೋರಿ ಕೃಪೆ ಮಾಡಿರುವ, ಹೊಸಗನ್ನಡದ 'ಕವಿಚೂತವನ ಚೈತ್ರ'ರಾದ ಶ್ರೀ 'ಶ್ರೀನಿವಾಸ'ರಿಗೆ ಒಪ್ಪಿಸಿಕೊಟ್ಟು ಬಹು ಹಗುರವಾಗಿ ಬಿಟ್ಟಿದೇನೆ.

ಈ ನಲ್ಮೆಯನ್ನು ನನಗೊದಗಿಸಿಕೊಟ್ಟಿರುವ ಶ್ರೀ ಯದುಗಿರೀಶನನ್ನೂ ಹಿರಿಯರನ್ನೂ ಮಿತ್ರರನ್ನೂ ಮತ್ತೊಮ್ಮೆ ವಂದಿಸಿ, ನೆನೆದು ಹಾಯಾಗುತ್ತೇನೆ.

ತಾರಣ ಸಂವತ್ಸರ
ಯುಗಾದಿ

ಪು. ತಿ. ನ.

# ಪರಿವಿಡಿ

# ಶಾರದ ಯಾಮಿನಿ

## ಮರ್ತ್ಯದೇಗುಲದಲ್ಲಿ ಅಪ್ಸರೆಯರ ಪೂಜೆ

ಬುವಿಗಾಯಿತು ಬೆಳುದಿಂಗಳ
ಸೇತುವೆ ಇಗೊ ಬನ್ನಿ ;
ನಂದನವನ ಕುಸುಮಂಗಳ,
ಕೆಳದಿಯರೇ, ತನ್ನಿ.
ದೈನಂದಿನದಿಳೆಯಾರ್ತಿಯು
ಪೂಜೆಗೆ ಆಸತ್ತು
ಬೇಸತ್ತಿಹ ಮಾದೇವನ
ನಲಿಸುವ ಈ ಹೊತ್ತು.

ಜಾರ್ಬಟ್ಟೆಯೊಳಡಿಗೆಜ್ಜೆಯು
ನೇವುರ ಝುಣರೆನಲಿ,
ಹಾಸಿಗೆಯೊಳು ಹಸುಮಕ್ಕಳು
'ಬಂದರಿಗೋ' ಎನಲಿ.
ಬಗೆಗೊಳ್ಳುತ ಭ್ರಮೆಗೊಳಿಸುವ
ಕಂಪಿನ ಹರಹಿನಲಿ
ದಿವ್ಯಾಗಮವಾವುದನೋ
ತಿರೆಯವರೂಹಿಸಲಿ.

ಮಂದಾರದ ಹೂಮಾಲೆಯೊ-
ಳೀಶನ ಸಿಂಗರಿಸಿ,
ಮನಕುತ್ಸವಮಪ್ಪಂತೀ
ಹೊಂದುಗುಲವ ಧರಿಸಿ,
ಸುರತರುಗಳ ಫಲವರ್ಪಿಸಿ,
ಸೊದೆಕಳಶವ ನಲಿಸಿ,

ತಾರಾರೋಚಿಯ ದೀಪದ
 ಆರತಿಯಂ ಬೆಳಸಿ.

ಮೃದುಮಂಜುಳ ಗೀತಂಗಳ
 ಮಂಗಳವೆನೆ ಹಾಡಿ,
ಭಾವುಕಜನ ರೋಮಾಂಚನ
 ಭಾವಂಗಳ ಹೂಡಿ,
ಸುಳಿಗಾಳಿಯೊಳೊಲೆದಾಡುವ
 ಬಳ್ಳಿಯ ನಾಚಿಪೊಲು,
ಗಾನದ ಹುರುಳನೆ ಸರ್ತಿಸಿ
 ಬಗೆ ಬಗೆ ಹಾಪದೊಳು.

ನಿಮ್ಮರ್ತಿಯ ಈ ಪೂಜೆಗೆ
 ಒಲಿಯಲಿ ಮಾದೇವಂ ;
ತಿರೆಯವರರೆತಿಳಿವಿರುಳಂ
 ಬೆಳಗಲಿ ನಗೆಭಾವಂ.
ಇವ ಕಂಡುದ ಅವ ಕಂಡುದ
 ಕಂಡಿವರೆಲ್ಲವುಮಂ
ನಲಿದೆಸಗಲಿ ಬಾಳೊಟ್ಟಿನ
 ಮಂಗಳ ಮಂಗಳಮಂ.

# ಅಂತರ್ಯಾಮಿಯ ಒಂದು ಸೋಗಿನ ದರ್ಶನ

೧

ಬೆಳುಬೆಳಗಾಯಿತು, ಎಳಬೆಳಕಾಡಿತು
ದೇವನ ಹಳ್ಳಿಯ ನೆಲ ನಲಿದಿತ್ತು.
ಆತ್ಮೋಲ್ಲಾಸದ ಮಧುರಾಲಾಪದ
ತೊಟ್ಟಿಲ ಮಗುವೊಲು ಜಗವುಲಿದಿತ್ತು.

ಆಗಸ ಮಾನಸಸರದೊಳು ಮಿಂದೊಲು
ತಣ್ಣನೆ ತೆಳುಗಾಳಿಯು ಬೀಸಿತ್ತು;
ಎದುರಿನ ಹೊಲದೊಳು ಹೊಂಗೆಯ ತುರುಗಲು
ಬೆಳಕಿನ ತುಂತುರುಗಳ ಹನಿಸಿತ್ತು.

ಆವುದೊ ಹಾಡಿಗೆ ಅಭಿನಯಿಸುವ ತೆರ
ಅರಳಿಯು ಎಲೆಗೈಯಾಡಿಸುತಿತ್ತು;
ಮುಗಿಲಿಳೆ ಕೂಡುವ ತಾಣದಿ ಬೆಟ್ಟವು
ಮುಗಿಲಿಗಿಂತಲೂ ಹಗುರಾಗಿತ್ತು.

ಏತಕು ಅಂಟದೆ ತನ್ನಾರಾಮದಿ
ಹದುಳದಿ ನೆಮ್ಮದಿಯೊಳು ಮನವಿತ್ತು.
ದೇವನಹಳ್ಳಿಯ ದಿನವಿಂತಿತ್ತು,
ದೇವರಗಾಡುಂಬೊಲದಂತಿತ್ತು.

೨

ಇಂತಾ ದಿನವಿರೆ ಬಿನದಕೆ ಮೀಸಲು,
ನನ್ನ ಮನಂ ಪಟವಿಳಿಸಿದ ಓಡೊಲು;
ಅವಧಾನವ ಕೆಡಿಸುವರಾರಿಂತು
ನನ್ನನೆ ದುರುದುರು ದಿಟ್ಟಿಸುತಿಂತು?

ಇತ್ತೆಡೆಯೊಮ್ಮೆಗೆ ಅತ್ತೆಡೆಯೊಮ್ಮೆಗೆ
ಸುಳಿ ಸುಳಿದಾಡುತ ಚಣಚಣ ನಿಂತು
ನನ್ನೆದುರೆನ್ನನೆ "ಕೌತುಕವಿದ ನೋ-
ಡೆ"ನ್ನುವ ತೆರ ನಿಟ್ಟಿಸುತಿದೆ ಜಂತು!

ಕೊಂಕಿದ ಕೋಡಿನ ಮುರುಟಿದ ಮುಸುಡಿನ
ಹಳ್ಳದ ಮೂಗಿನ ಬಿರಿಹೊಳ್ಳೆಗಳ,
ಬಾಳೆಯು ಮೋತೆಯು ಗಾತ್ರದ ಕಿವಿಗಳ
ಮೃಗವಿದಿಗೋ ಗುಡ್ಡೆಯ ಕಣ್ಣುಗಳ!

"ಬಲ್ಲೆ ನಾ ನಿನ್ನ, ನೀನೋ ನನ್ನನು
ಗುರುತಿಸಲಾಗದೆ ಭ್ರಮೆಯಿಂದಿರುವೆ.
ಇದುವೇ ಬಿನದಂ—ಅಹಹಾ!" ಎಂಬೊಲು
ನಗಲಾಗದೆ ನಗುತಿತ್ತೇನೊರೆವೆ.

"ನೋಡಣ್ಣಾ, ನೋಡಣ್ಣಾ" ಎಂದಿದ
ಬಳಕೆಯ ಹೆಸರೊಳೆ ಕರೆಯಿತು ಹಸುಳೆ.
"ಎಳಮನಸಿನ ಮಗು—ಬಲ್ಲುದೆ? ನೀನೋ?"
ಎನ್ನುವ ತೆರನದು ನೋಡಿತು ಮಗುಳೆ.

೩

ಇಂತಾ ಮೃಗವೇಷನು ಬಿನದಿಸುತಿರೆ
ವೇಷವನಾಂತವನಾರೆಂದಾನಿರೆ,
ಸೂಟಿಯೊಳಾ ನೋಗಿನ ಒಳಹೊಕ್ಕು
ನಿಜವರಿತೋಹೋ ಎಂದೆನು ನಕ್ಕು—

"ಬಲ್ಲೆ ಬಲ್ಲೆ ಈ ನಗೆಯಾಟವ, ಬಾ,
ಮೊಗವಾಡವ ಕಳೆ—ಏನಿದು ಹುಚ್ಚು;
ಇನ್ನೀ ವಂಚಿಸುವಾಟವು ಸಾಗದು,
ಬಿನದ ಸಾಕಣ್ಣಾ, ಯಾರಿಗೆ ಮೆಚ್ಚು?"

ಅಂತರ್ಯಾಮಿಯ ಒಂದು ಸೋಗಿನ ದರ್ಶನ

ಇಂತೀ ತೆರ ನಾ ಸದರದಿ ನುಡಿಯಲು
ದೌಡೋಡಿತು ಮೃಗ ಬಲು ನಾಚಿದವೊಲು—
ಮರುಚಣವೆಲ್ಲವು ನಿತ್ಯದೊಲಾಯ್ತು,
ದೂರ ಒಂದೆಮ್ಮೆ ಮೇಯುತಲಿತ್ತು !

೪

ದೇವನಹಳ್ಳಿಯೊಳಾ ಒಂದರೆಚಣ
ಮಾಯೆ ತೆರೆದು ದರ್ಶನವಿತ್ತವನಂ
ಅಂದಿಂದೆಲ್ಲಾ ರೂಪದ ಮರೆಯೊಳು
ಹುಡುಕುತ ಹಂಬಲಿಸಿದೆ ನನ್ನ ಮನಂ.

# ದೀನಗಿಂತ ದೇವ ಬಡವ

ಹರಿಗೆ ಎಂದು ಗುಡಿಯನೊಂದ
ಕಟ್ಟುತಿರುವೆನು,
ದೀನಗಿಂತ ದೇವ ಬಡವ-
ನೆಂದು ಬಗೆವೆನು.

ನಿಜವು, ವಿಷ್ಣು ವಿಶ್ವದರಸು, ವಿಶ್ವಧಾಮನು,
ಒಂದೆ ಹೆಜ್ಜೆಯಿಟ್ಟು ಬುವಿಯ ನಾಕವಳೆದನು.
ಎಷ್ಟು ಚಿಕ್ಕದೆನ್ನ ಹೃದಯ; ಏನು ಹೊಲಸದು!
ಇಲ್ಲು ನೆಲೆಯ ಬೇಡುವವನ ದೈನ್ಯವೆಂಥದು!

ಬೆಳ್ಳಿಬೆಟ್ಟದೊಡೆಯ, ಶಿವನು, ಚಂದ್ರಮೌಳಿಯು,
ಪ್ರೇಮಮೂರ್ತಿ, ಗಿರಿಜೆ, ಅವನ ಪ್ರಣಯಕಾರ್ತೆಯು;
ಆದರವನ ಬೀಡು ಮಸಣ, ಲೇಪ ಬೂದಿಯು;
ಚರ್ಮ ಉಡಿಗೆ, ಹಾವು ತೊಡಿಗೆ, ಬದುಕು ಬಿಕ್ಕೆಯು.

ದೀನಗೊಂದು ವಿಶ್ವ ಸಾಲದಾಸೆತಣಿಸಲು
ದೇವಗೆದೆಯ ಗುಡಿಲೆ ಸಾಕು ನಲಿದು ನೆಲಸಲು.
ಹರಿಗೆ ಎದೆಯೊಳೊಂದು ಗುಡಿಯು ಕಟ್ಟುತಿರುವೆನು,
ದೀನಗಿಂತ ದೇವ ಬಡವನೆಂದು ಬಗೆವೆನು.

# ಕೊಳಲುಲಿವು

ಆವನೀ ಉನ್ಮತ್ತ—ಈ ಸರಿಯ ಹೊತ್ತಿನೊಳು
ಕೊಳಲ ಬಾರಿಸಿ ಮಧುರ ರಾಗವನು ರಚಿಪನಿಂತೆ?
ಕರಿಮುಗಿಲ ಬಲೆಯೊಳಗೆ ಪೆರೆ ಸಿಲುಕಿ ನೋಯುತಿದೆ
ಗಾಳಿ ಬಾನಲೆಯುತಿದೆ ಪಾಳೆಯದ ಭೂತದಂತೆ.

ಈಗಿತ್ತ ಆಗತ್ತ ಕಿವಿಯಾಚೆ ದೂರತ್ತ
ಮುಗಿಲ ಮರೆ ಜೊನ್ನದಿಂ ಒಡಾದ ರಜನಿಪಥದಿ
ತರಳ ಮುರಲೀನಾದವಿದನೆಲರು ಒಯ್ಯುತಿದೆ
ಬಾಲಕೃಷ್ಣನ ತೃಣಾವರ್ತನಂದೊಯ್ದ ತೆರದಿ.

ಏನು ಚೋದ್ಯವಿದವ್ವ—ತಾಮಸಿಯ ಕಾಳೆದೆಯೊ-
ಳನುರಾಗವುದಿಸಿದೊಲು ತಿಂಗಳಿನ ಬೆಳಕಿದಾಯ್ತು!
ಎಲರ ನಡೆ ಹಗುರಾಯ್ತು, ಬಸದ ಬಗೆ ಬೇರಾಯ್ತು,
ಆಸೆ ಮುಗಿದೆನ್ನೆದೆಗು ಭಾವದಾವೇಗವಾಯ್ತು!

ಆವನೀ ಮಾಯಾವಿ—ಇಂತು ಸಮರಾತ್ರಿಯೊಳು
ಕೊಳಲ ಬಾರಿಸುತಿರುಳ ಮೌನತೆಯ ವ್ಯಥಿಪನಿಂತೆ—
ಬೆಳಕಿರುಳ ಮುದ್ದಿಸಿದೆ, ಜಗ ಸೊಗದಿ ನಿದ್ದಿಸಿದೆ,
ಗಾಳಿ ಬಾಂದೊಟ್ಟಿಲೊಳು ಪವಡಿಸಿದೆ ಹಸುಳೆಯಂತೆ!

# ಒಂದು ಜೊನ್ನದ ಇರುಳು

ತಾಳೆಯ ಹೂಹುಡಿ ಬಣ್ಣದ ಜೊನ್ನವು
ಇರುಳೊಳು ಹರಡುತಿದೆ—ತಮ
ತಿಳಿಯಿತು ಎನ್ನುತಿದೆ.

ಅರಿಲಿನ ಕಿರುಕಿರು ದೋಣಿಗಳಾಗಸ-
ದೆದೆಯೊಳು ತೇಲುತಿವೆ—ನಗು-
ವಮರರ ತೋರುತಿವೆ.

ಮುಗಿಲ ತೀರದೊಳು ರಾಜನೌಕೆಯುಹ
ಕರೆಯನು ಬಿಟ್ಟಿತಿಗೋ—ಮುದ-
ಕೆಂದೆಯೆ ಸಾಗಿತಿಗೋ.

ಕನಸಿನ ಬನದೊಳು ಭಾವದ ಪಾತರ-
ಗಿತ್ತಿಗಳೆದ್ದಿಹವು—ನನ-
ಮನವನು ಕದ್ದಿಹವು.

ಕರಣದ ದುಂಬಿಯು ದೆಸೆದೆಸೆಗೋಡಿಸಿ
ಚಣಕಳಿವೀ ಚೆಲುವಿನ ಹುರುಳ
ನುಡಿಗಳ ಜೇನಿನ ಗೂಡೊಳು ತುಂಬಿಸ-
ಲೆಳಸಿಹನೆನ್ನಯ ಕವಿ ಮರುಳ.

# ಕೆನ್ಸಿಂಗ್‌ಟನ್ ಪಾರ್ಕ

(ಗೋ. ಕೃ. ಅವರಿಗೆ)

ಎದುರು ಬಾನ ತೀರದಲ್ಲಿ
ರಾಶಿ ರಾಶಿ ಹೊನ್ನ ಚೆಲ್ಲಿ
ಸರಿಯುತಿಹಳು ಸಂಜೆ, ಕೆಳೆಯ,
ಸ್ವರ್ಣಲುಬ್ಧವಾಗಿ, ಎಲೆಯ
ಕೈಗಳಿಂದ ಬೊಗಸೆಯಾಯ್ದು
ಹಳುವಿಹುದಿಕೊ ಹುಯಿಲಗಯ್ದು.
ಇದನು ಕಂಡು ಕೊಂಕು ಚಂದ್ರ
ನಗುತಿಹನದೊ ಮುಗಿಲಿನಿಂದ್ರ
ಕೊನೆ ಆರಿಕೆ ನಾಣ್ಯದಂತೆ
    ಸ್ವರ್ಣಲೇಖೆ ಅಳಿಯಿತು.
ತಣಿವರಿಯದ ತೃಷ್ಣೆಯಂತೆ
    ಬನವ ಕತ್ತಲಡಸಿತು.

ಕದಡುನೀರು ತಿಳಿವ ತೆರದಿ
ನೀಲವಾಯ್ತು ಬಾನ ಶರಧಿ.
ತಲದಿ ಹೊಳೆವ ಶುಕ್ತಿಯಂತೆ
ಕಾಣಬಹವು ಚುಕ್ಕಿಸಂತೆ.
ಮೆಲುಮೆಲ್ಲನೆ ಬೆಳಕ ಹೀರಿ
ಇಳಿವಳಿರುಳು ತಿರೆಯ ಸಾರಿ;
ಸ್ತಬ್ಧವಾಗುತಿಹುದು ಸೃಷ್ಟಿ.
ದಿವಕಾಯಿತು ದಿವ್ಯದೃಷ್ಟಿ.
ಒಲಿದವರೀ ಉಪವನದೊಳು
    ಪ್ರಕೃತಿಪುರುಷರಂದದಿ
ತಮ್ಮನರಿಯೆ ಜಗವ ಮರೆಯೆ
    ನೆರೆವರೇಕಾಂತದಿ.

ದಿಟವಾಗಿಯು ಚೆಲುವು ತಾಣ
ಈ ಪ್ರಶಾಂತ ಕ್ರೀಡಾವನ.
ಹಲಸೂರಿನ ಕೆರೆಗೆ ನೆರವು
ಮುಗಿಲೆ ಎನ್ನೆ ನೀರ ಹರವು.
ಮೇಲು ಕೆಳಗು ನಿರಾಧಾರ-
ವೆನೆ ಬಿಂಬಿಪ ಸರಸ್ತೀರ.
ಶಿವನ ಡಮರುವಂತೆ ತರುವು
ನೆಳಲಿಸೊಡನೆ ಬೆರೆವ ಚೆಲುವು.
ಕುಡಿವರಿಯುವ ಕಲ್ಪಲತೆಯ
ಹೋಲ್ವ ದೀಪವಲ್ಲರಿ
ಕೆಳಗೆ ತೇಲ್ವ ಆರಿಲ ಹೂವ
ನಂದನಕಾಯ್ತು ಚ್ಚರಿ.

ಅಕ್ಕೊ ಆ ಹಿರಿಯ ಮರದ
ಮುಡಿಯ ಮೇಲೆ ಬೆಳ್ಳಿಯಿಹುದ!
ಕಡಲ ನಡುವೆ ನಿಂತ ಮಹಾ-
ಫಣಿಯ ಮಣಿಯ ತೆರದೊಳಹಾ!
ವಿಸ್ಮಯಕರವೀ ದರ್ಶನ.
ಮಲಗಿಹನೋ ಮಧುಸೂದನ
ವನದ ಶ್ಯಾಮಗರ್ಭದಲ್ಲಿ
ಹೊಂಗನಸಿನ ಪ್ರಭೆಯ ಚೆಲ್ಲಿ
ತನ್ನ ಸುಪ್ತ—ನಿದ್ರೆಯಾಚೆ
ಆದಿಶೇಷ ತಲ್ಪದೊಳ್
ದೆಸೆಯಾಚೆಗೆ ಲಯಕೆ ಸಂದ
ತಿರೆಯ ಸೃಷ್ಟಿಕಲ್ಪದೊಳ್?

ದಿಟ, ಸುಂದರವೀ ಉಪವನ.
ನೀನೊಲಿದಂತೆನ್ನಯ ಮನ
ತೃಪ್ತವಾಯ್ತು ಚೆಲುವ ಹೀರಿ
ನನಸಿನ ತೆರೆ ಮರೆಗೆ ಜಾರಿ.

## ಕೆನ್ಸಿಂಗ್‌ಟನ್ ಪಾರ್ಕ್

ಆತ್ಮವಂತರಿಲ್ಲಿ, ದಿಟವು,
ಆತ್ಮಮಗ್ನರಾಗಲಳವು;
ಈ ತಾಣಕೆ ಬಹ ವಿದಗ್ಧ
ಆಗಬಹುದು ಭಾವಮುಗ್ಧ;
ಒಲಿದ ಮಂದಿ ತಮ್ಮ ಕನಸ
ಇಲ್ಲಿ ಮಾಡಬಹುದು ನನಸ;
ಜಲದೆದೆಯೊಳು ಸೃಷ್ಟಿ ಇಲ್ಲಿ
  ಸ್ನಿಗ್ಧವಪ್ಪ ತೆರದೊಳು
ಕವನವೊಂದು ಮೂಡಬಹುದು
  ಇಲ್ಲಿ ಕವಿಯ ಬಗೆಯೊಳು.

# ಪ್ರಶ್ನೆ—ಉತ್ತರ

ಬೇಡಿದುದೆಲ್ಲವ ಕೊಡುವಾ ಜೋಳಿಗೆ
ಬಯಸಿದ ತಾಣಕೆ ಒಯ್ಯುವ ಹಾವುಗೆ
ದೊರೆತ ತೆರದಿ, ಮಗು, ರಾಜಕುಮಾರಗೆ
ನಿನಗೂ ದೊರೆತೊಡೆ ಏಗೆಯ್ವೆ ?

"ಜೋಳಿಗೆ, ಜೋಳಿಗೆ, ಹಾರೆ ಕೊಡೆನುವೆ,
ಒಂದೇ ನೆಗೆತಕೆ ಬಾನಿಗೆ ನೆಗೆವೆ,
ಎತ್ತಿಡೆ ಹೋದರು ಬೆನ್ನೊಳೆ ಬರುವೀ
ಚಂದಕ್ಕಿ ಮಾಮನ ಛೂರ್ಗೈವೆ."

# ಮಳೆರಾಯ

ಬಾನೊಳಗಾಯಿತು ಮುಗಿಲು
ಸೊಕ್ಕುಳಿದಡಗಿತು ಬಿಸಿಲು
ಈ ನೋಟಕದೇಂ ಮಿಗಿಲು
ಸ್ಥಿತಿಗೇಕಯಿ ಈ ದಿಗಿಲು ?
ಗೂಡೆಡೆ ಹಾರಿತು ಹಕ್ಕಿ
ಆವೋಡಿತು ದೌಡಿಕ್ಕಿ
ತರು ಮೊರೆಯಿತು ಶರಣಿಕ್ಕಿ
ಜನ ಕಕ್ಕಾವಿಕ್ಕಿ !

ದೆಸೆಗುಬ್ಬಸವೀ ಸದ್ದು
ಎನೆ ಗುಡುಗಲು ಗುಡುಗೆದ್ದು,
ಬರಲು ಪರಾಕನು ಹೇಳಿ
ವೈತಾಳಿಕ ಭೋರ್ಗಾಳಿ,
ಮಿಂಚಿನ ಕತ್ತಿಯ ವರಸೆ
ಆಟೋಪವ ಬಲು ಮೆರಸೆ
ಬಂದನಿಗೋ ಮಳೆರಾಯ
ಕಾರೊಡಲತಿಕಾಯ !

ಬ್ರಹ್ಮಾಂಡವೆ ಬಿರಿದವೊಲು
ಹೊಳೆದಪ್ಪಳಿಸಿತು ಸಿಡಿಲು,
ಬಾಂದಳವೇ ಕಳಚಿದೊಲು
ಜಲಕಾಯಿತು ನೆಲಮುಗಿಲು,
ಮನೆ-" ನೋವನ ತೆಪ್ಪ "ದೊಳು
ಜನ ಹದುಗಿತು ಭೀತಿಯೊಳು,
ಜಂಝಾನಿಲ ವೈಹಾಳಿ
ಮುಗಿಲಿಟ್ಟಿತು ದಾಳಿ.

ಇಂತೈತರೆ ಕಾರ್ಮುಗಿಲು,
ಸೊಕ್ಕುಡುಗಲು ಡಗೆಯಳಲು,
ಈ ಹದುಳಕದೇಂ ಮಿಗಿಲು
ಸ್ಥಿತಿಗೇಕಯಿ ಈ ದಿಗಿಲು !
ಮಂಗಳಕೇಕೀ ವೇಷ
ಈ ತೆರ ವಿಷಮವಿಲಾಸ,
ಶಿವಕೇಕೀ ದುಮ್ಮಾನ ?
ಇದು ಯಾವ ಸುಮಾನ !

# ಒಂದು ಸಂಜೆ

ಹೊತ್ತು ಮುಳುಗಿತು—ಮಾಸಿಹೋಯಿತು
  ಭೂಮಿ ಹೊರಳುತ ನಸುಕೊಳು,
ತಾಯಿ ಕಣ್ಮರೆಯಾಗೆ ಧೂಳಿಸೊ-
  ಳಾಡಿ ಮಾಸುವ ಮಗುವೊಲು.

ಕತ್ತಲಾಯಿತು ಹೊಳೆದುವಿದಿಗೋ
  ಮೇಲೆ ಚುಕ್ಕಿಗಳಂದದಿ,
ಅಂಧಕಾರದ ತೆರೆಗಳಾವುದೊ
  ಬೆಳಕ ಬಿಂಬಿಸುವಂದದಿ.

ತಲದಿ ನಾನಿಹೆನೀ ಪುರಾತನ
  ತಮಕು ತಾರೆಗು ಮೋಹಿಸಿ,
ನಿಜ ವಿಷಾದದೊಳಲ್ಲಿಗಲ್ಲಿಗೆ
  ಹೊಳೆವ ಭಾವಕೆ ಹೋಲಿಸಿ.

# ಶಾರದ ಯಾಮಿನಿ

ಓ ತಾರಾಪಥ ಗಾಮಿನಿ
ಶಾರದ ಯಾಮಿನಿ
ನಕ್ಷತ್ರೋದ್ದೀಪಿಕೆ
ಶೋಭನೆ ಕಾರ್ತಿಕೆ
ಕಾಂತಿಮಯೀ ಶಾಂತಿಮಯೀ
ದಯಗೈ ತಾಯೀ.

ಕ್ಷೀರಪಥದೊಳಗೆ ಧೂಳನೆಬ್ಬಿಸುತ
ತೇರು ಹರಿದು ಬರೆ, ನಿನ್ನನೀಕ್ಷಿಸುತ
ತಾರೆ ಬಳಗ ಹೆದ್ದಾರಿಯಿಕ್ಕೆಲದಿ
ತುದಿಯ ಕಾಲಿನೊಳು ನಿಲ್ಲೆ ಕೌತುಕದಿ,
ಹೊಸಿಲನೇರಿ ಸುಸ್ವಾಗತವೆನುತೆ
ಕುಡಿಯಾಡಿಸುತಿರೆ ಸಾಸಿರ ಹಣತೆ,
ಇದುವೇ ತಿರೆ ನಾವಿಲ್ಲಿಹೆವೆಂದು
ಸನ್ನೆಗೈವರೋ ನಿನಗೆನುವಂದು
ಮದ್ದಿನ ಸದ್ದೊಳು ನಗೆಗದ್ದಲದೊಳು
ಬಣ್ಣದ ಬಾಣದಿ ತಿಣ್ಣನೆ ಹುಯಿಲೊಳು
ಬೀದಿಯೊಳೆಳೆಯರು ನಿನಗುತ್ಸವಿಸೆ,
ಈ ದನಿ ಎನ್ನಾಸೆಯನೆಚ್ಚರಿಸೆ,
ಹೊರಗೆ ಬಂದು ನಾನಂಬರ ತಲಕೆ
ಮೊಗವೆತ್ತುವೆನಾ ಸಂದರ್ಶನಕೆ.
ಆದೊಡಹಾ ಮುಂಬರಿದಿಹೆ ನೀನು
ದಿನದಿನವೂ ತುಸ ತುಸ ತಡ ನಾನು
ನಿನ್ನ ತೇರು ನನ್ನಾಸೆಗು ಚುರುಕು
ನೀ ಮಿಗಿಲೆನ್ನಯ ಹಂಬಲಕು
ಓ ದಿಗಂತಪ್ರಯಾಣೆ
ಚಾರುಶಶಿಯಾನೆ!

## ಶಾರದ ಯಾಮಿನಿ

ಇರುಳಿಗೆ ಮುಂಬೆಳಗಿನ ತೆರೆ ಬೀಳೆ
ರಂಗಕಿಳಿಯೆ ಚೆನ್ನುಡೆಯುಷೆ ಬಾಲೆ
ಮಂಜುಳ ರವ ಮೌನವನಚ್ಚರಿಸೆ,
ಸಂಜೀವನ ಮಂತ್ರವನುಚ್ಚರಿಸೆ
ಕುಳಿರು ಗಾಳಿ, ಬೆಳ್ಳನೆ ದಳ ತೆರೆದು
ಸೇವಂತಿಗೆ ಹೊನ್ನೊಳಗನು ತೋರೆ,
ನಿನ್ನ ನೆರಳೊ ಎನೆ ಬೆರಗನು ಪಡೆದು
ನಾನಾ ಹೂಗಳ ಸನಿಯಕೆ ಸಾರೆ,
ಹಸುರೊಳು ಹನಿ ನನ್ನೊಹೆಗೆ ಹೂಣ್ಗೊಡೆ,
ಕಂಡೆನೆಂಬೆ ನಾ ನಿನ್ನ ನಾಯೆಡೆ.
ಆದೊಡಹಾ, ನೀ ಮುಂಬರಿದಿರುವೆ,
ಎಂದಿನಂತೆಯೇ ನನ್ನನು ಮರೆವೆ,
    ಓ ನಿರ್ಜಿತ ಗಗನವಿಷಾದೆ
    ವಿಕಸಿತಾಹ್ಲಾದೆ!

ಮೃದು ಪದ ಪಾತಕೆ ತೆನೆ ನಸು ಬಾಗಿದೆ
ಉಯ್ಯಾಲನಾಡಿಹೆ ಎನೆ ಲತೆ ತೂಗಿದೆ
ಬಂದ ಪರಿಯನೀ ಹಕ್ಕಿ ಹಾಡಿದೆ
ಸಂದ ವರವನೀ ಹಸುರು ತೋರಿದೆ
ಸರಸಿ ಮಿಂಚಿಹುದು ನಕ್ಕೆಯೋ ಎನೆ
ನಿನ್ನನಂತು ನಾ ಕಾಣೆ ಶೋಭನೆ.
ನನ್ನ ಮನಕೊ ನೀನೊಂದನುಮಾನ—
ನನ್ನೆದೆಗೋ ನಿನ್ನರಿತ ಸುಮಾನ
    ಓ ತರಂಗ ತಾರಾಭರಣೆ
    ಸಂಮೋದ ಕಿರಣೆ!

ನಡುಬಾನೊಳು ದಿನಪನು ಸೊಕ್ಕಿರಲು,
ತಿಳಿನೀಲಕೆ ನೀಲಿಮೆ ಮಿಕ್ಕಿರಲು,
ಬಿಳಿಮೋಡವು ಪುಳಿನದ ತೆರನಾಗೆ,
ನಡುವೊಳು ತಣ್ಣನೆ ತಿಳಿಗೊಳವಾಗೆ

## ಶಾರದ ಯಾಮಿನಿ

ನೀನಾ ತೀರದೊಳಾಡಿ
ಕೊಳದೊಳು ಜಳಕವ ಮಾಡಿ
ಹಿಂದಿರುಗುವೆಯಾ ನಿನ್ನ ಸದನಕೆ
ಸಂಜೆಯ ಮೆರವಣಿಗೆಯ ಹಸದನಕೆ.
ಓ ಅಂಬುದ ಪುಳಿನ ವಿಹಾರಿಣಿ,
ನಭಸ್ತಾಪ ಹಾರಿಣಿ !

ನೀ ಮರಳಲು ನಿನ್ನಂತಃಪುರಕೆ
ಮರಳುವೆ ನಾ ನಿತ್ಯದ ಬೇಸರಕೆ.
ಹಗಲೊಳಾಸೆ ಮನದೊಳು ತೀರಿಹುದು
ಸಂಜೆಯುತ್ಸವಕೆ ಎದೆ ಹಾರಿಹುದು.
ಅಹ, ಇದಿಗೋ ! ಚೆಂಬೊನ್ನಿನ ಬೆಳಕಾಯ್ತು
ನನ್ನಯ ಮನೆ ನೆರೆಯಂಗಳದೊಳಗೆ,
ಹಕ್ಕಿಯ ಕಲರವ ಕಲಕಲವಾಯ್ತು
ಸರಸಿಯ ಮುಂದಣ ತೋಪುಗಳೊಳಗೆ
ಬಾನ ಬೀದಿಯೊಳು ಚೆನ್ನಲರೆರಚಿ
ಸಂಜೆ ನಡೆವಳು, ಹೋ ಎಂದರಿಚಿ
ಬಿನದಿಸೆ ಮಕ್ಕಳು ಜಗಲಿಯ ಮೇಲೆ
ಬಾ ಹೊರಗೆನ್ನುವಳೆನ್ನೆಳಬಾಲೆ,
ಮರಳಿಯಿಂತು ಜಗ ನಿನ್ನುತ್ಸವಕೆ
ಹಾರೈಸಿರೆ ನಾನಂಬರತಲಕೆ
ಮೊಗವೆತ್ತಿಹೆನೌ ಸಂದರ್ಶನಕೆ
ಓವೋ ತಾರಾಪಥಗಾಮಿನಿ
ಶಾರದ ಯಾಮಿನಿ
ನಕ್ಷತ್ರೋದ್ದೀಪಿಕೆ
ಶೋಭನೆ ಕಾರ್ತಿಕೆ
ಕಾಂತಿಮಯೀ
ಶಾಂತಿಮಯೀ
ಬಗೆವೊಗು ತಾಯೀ.

# ದೇಹ ಯಂತ್ರ ದುಡಿಯುತಿದೆ

ಡೌಡವ ಡೌಡವ ಎನ್ನುತ
ದೇಹಯಂತ್ರ ದುಡಿಯುತಿದೆ:
ಈ ಸ್ವತಂತ್ರ ತಂತ್ರವೆನ್ನ
ಮನಕೆ ದಿಗಿಲುಬಡಿಸುತಿದೆ.

ಎಲ್ಲಿ ಮುಟ್ಟಲಲ್ಲಿ ಮಿಡಿದು,
ಕಿವಿಯು ಬಳಿಯೆ ಸುಡಿದು ದುಡಿದು
ವಿರತಿಯಿಲ್ಲದೊಂದೆ ರೀತಿ,
ಎನಗಾಲಿಸಲಾಗೆ ಭೀತಿ;
ಡವಡವೆಂದು ಡವಡವೆಂದು
ದೇಹಯಂತ್ರ ದುಡಿಯುತಿದೆ.

ಇರುಳ ಕತ್ತಲೆನ್ನ ಬಳಸಿ
ಹಬ್ಬಿರುವುದು ಸುತ್ತಲೂ,
ಬಿಟ್ಟ ಕಣ್ಣ ಬಾಸು ನನ್ನ
ನಿಟ್ಟಿಸುತಿಹುದೆತ್ತಲೂ,
ಒಳಗು ಹೊರಗು ಗಾಳಿಯಾಡಿ
ಏನೊ ಗೈಯುತಿಹುದು ನೋಡಿ:
ಯಾರಾಣೆಯ ಹೊತ್ತೊ ಕಾಣೆ
ದುಡಿಯುತಿಹುದು ತನಗೆ ತಾಸೆ.
ಇರುಳ ಕತ್ತಲೆನ್ನ ಬಳಸಿ
ಹಬ್ಬಿರುವುದು ಸುತ್ತಲೂ.

ನೆಲೆಕಾಣದ ತಿರುಕನಂತೆ
"ನಾನೆ"ನ್ನುವ ತತ್ತ್ವವು
ತಿರಿಯುತಿಹುದು ಪ್ರಶ್ನಿಸುತ್ತ
"ಎಲ್ಲೆನ್ನಯ ಸ್ವತ್ವವು?"

ವಿಷಯೇಂದ್ರಿಯವೆರಡು ನನ್ನ -
ನಣಕಿಸುತಿವೆ ನಾಚುವನ್ನ
 ' ನಾವೊಂದಲು ನೀ ನಿಮಿತ್ತ,
 ಸಂಟರಾವು ಹ್ಹಹ ' ಎನುತ್ತ.
ನೆಲೆಯರಿಯದ ತಿರುಕನಂತೆ
 " ನಾನೆ "ನ್ನುವ ತತ್ತ್ವವು
ತಿರಿಯುತಿಹುದು ಪ್ರಶ್ನಿಸುತ್ತ
 " ಎಲ್ಲೆನ್ನಯ ಸ್ವತ್ವವು ? "

# ತಿಂಗಳ ಕೊನೆ

ನಾ-ಕಾಣೆ ನಾಕಾಣೆ
ಜೇಬಿನೊಳಿರುವುದು ನಾಲ್ಕೇ ಆಣೆ
ವೆಚ್ಚಗೈವುದೆಂತಿದ ನಾ ಕಾಣೆ!

'ಬಾರೋ ಬಾರೋ ವಿನೋದಗಾರ'
ಎಂಬುದು ಸರ್ಕಸ್ ಹುಡುಗಿಯು ಡೇರ;

'ಇದಕೂ ಮಿಕ್ಕಿನದುಂಟೇ, ಪೊದ್ದು'
ಎಂಬುದು ಸಿನಿಮಾ ಡೋಲಿನ ಸದ್ದು;

'ಸಗ್ಗದ ಸೊಗವದು ಬೇಕೇ? ತಾ—ತಾ'
ಎನ್ನುವುದೀ ಕಿವಿಸವಿ ಸಂಗೀತ;

ಒಳಗೊಂದೆಂಬುದು, 'ತಿನ್ನುವ ಸುಖಕೆ
ಸಮಸುಂಟೇ—ಹುಸಿ ಕಾಣಿಕೆ ತೋರಿಕೆ!'

ಸನಗೋ ನಾಲ್ಕಾಣೆಯೆ ಆಧಾರ,
ಮನವೋ 'ಅಲಾಬಿ ಪಾಳೆಯಗಾರ!'

ಕಿವಿಯೋ ಈ ಕಡೆ, ಕಣ್ಣೋ ಆ ಕಡೆ,
ನಾಲಗೆ ಬೇರೆಡೆ—ಹೋಗುವೆನೆತ್ತೆಡೆ?

* * *

ಆ ಪಾರ್ಕೊ ಈ ಪಾರ್ಕೋ ತಿರುಗಿ
ತಿನ್ನುತ ಬಟಾಣಿ ಕಡ್ಲೆಯ ಬುರುಗಿ

ಮರಳುವುದೇ ಸೈ—ಸಲ್ಲದು ವೆಚ್ಚ.
ಕೆಡುವುದೆ ದುಡ್ಡಿದ್ದರೆ ಬಾ ಹುಚ್ಚ!

# ಸೈನಿಕರ ಹಾಡು

ಲೆಫ್ಟ್ ರೈಟ್ ಲೆಫ್ಟ್ ರೈಟ್ ಎನು ಗೆಣೆಯಾ,
ಕಾಳೆಗಕ್ಕೆ ಮನ ಮಾಡಿ ಮರೆ ಮನೆಯಾ!

ಢಮು ಢಮು ಢಮು ಝುಣ ಢಮ್ಢೋಲು
ಕೈ ಬೀಸ್ತಾ ಪದ ಹೇಳ್ತಾ ಇಡು ಕಾಲು
ಲೋಕದೊಳಗೆ ಏಸೈತೊ ಇದಕು ಮೇಲು—(ತಮ್ಮ)
ದೊರೆ ಇಚ್ಛೆ ಶಿವನಿಚ್ಛೆ ಎನುತ ಬಾಳು.
ಲೆಫ್ಟ್ ರೈಟ್ . . .

ಮನೆಯೊಳಗೆ ಏಸೈತೊ ಬರಿಗೋಳು
ಉಣ್ಣೋದಕ್ಕೆ ಇಲ್ಲವಲ್ಲೋ ಹಿಡಿ ಕೂಳು
ಕುಯ್ಯೊ ಮೊರೆಯೊ ಅಳುತಾರೆ ಮಡದಿ ಮಕ್ಕಳು
ನೋಡಿ ಅಯ್ಯೊ ಅಂತಾರೆ ನೆರೆಯೊಕ್ಕಲು.
ಲೆಫ್ಟ್ ರೈಟ್ . . .

ಇಕ್ಕೊ ಇಕ್ಕೊ ಹೆಂಗೈತೆ ಈ ದ್ರಿಸ್ಸು
ಇಕ್ಕಿದರೇನೆ ಉಕ್ತೈತೆ ಹುಮ್ಮಸ್ಸು
ಕಂಡ ಜನಕಾಗುತ್ತೈತೆ ಎದೆಯಳುಕು—(ತಮ್ಮ)
ನಮ್ಮೊರ್ನಾಗೆ ಯಾರ್ಗೈತೆ ಈ ತಳುಕು.
ಲೆಫ್ಟ್ ರೈಟ್ . . .

ಬೈಗು ಬೆಳಗು ಕವಾಯಿತ್ತು ಎಡ ಬಲ
ದಳವಾಯಿ ಅಂತಾನೆ ಭಲ ಭಲ
ಕೈಕಾಲ್ಗೋಳ ಬೀಸಾಡ್ತಾನೆ ನಮಗೆ ಸಂಬಳ
ಎಲ್ಲಾರಂಜೋ ಸರ್ಕಾರಾನೆ ನಮಗೆ ಬೆಂಬಲ.
ಲೆಫ್ಟ್ ರೈಟ್ . . .

## ಸೈನಿಕರ ಹಾಡು

ನೇಗಿಲ ಮೊನೆಯಾಗೇಸೈತೆ ಬರೀ ಮಣ್ಣು
ಭರ್ಜಿಕೊನೆಯಾಗ್ಹೊರವಾಗ್ಯೈತೆ ಹೊನ್ನಿನ್‌ಹಣ್ಣು
ಹಂಗೆ ಹಿಂಗೆ ಕುಲುಕಿಸ್ತಿದ್ರೆ ಗಳಿಗ್ಹೊಂದ್ಸಲ
ಮಂತ್ರಿಸ್ಹಾಗೆ ಹರೀತೈತೆ ಅಪ್ಪನ್‌ಸಾಲ.
ಲೆಫ್ಟ್ ರೈಟ್ . . .

ಹೊತ್ತಿಗ್ಹೊತ್ತಿಗಸ್ವವುಂಡು ಕಸರತ್ ಮಾಡಿ
ಕಂಡಾಗ್ಲೆಲ್ಲಾ ನಾಯಕರಿಗೊಂದು ಸಲಾಂ ಹೊಡಿ
ಎದುರ್ಹಾಡ್ದೆ ಬದಲ್ಮಾಡ್ದೆ ಹೇಳಿದ್ ಕೇಳು
ಇಲ್ಲದಿದ್ದರೆ ಆಗತೈತೆ ಸಿಸಗ್ ಜೈಲು.
ಲೆಫ್ಟ್ ರೈಟ್ . . .

ಹೊಡಿ ಎಂದರೆ ಹೊಡಿಯಬೇಕು ನಿಮ್ಮ ನಾಯಕ
ಹಿಡಿ ಎಂದರೆ ಹಿಡಿಯಬೇಕು ನಿಮ್ಮ ನಾಯಕ
ಆರ್‌ಡರ್ ಮಾಡ್ದಾಗ್ ನೋಡಬೇಕು ಅವನ್ ಸೆಡುಕ
ಉಹು ಎಂದರೆ ತಾಳ್‌ಬೈದ ಅವನ್ ಸಿಡುಕ.
ಲೆಫ್ಟ್ ರೈಟ್ . . .

ರಮುರ್ಝುಣ ರಮುರ್ಝುಣ ರಮುಢೋಲು
ಕೈ ಬೀಸಾತ್ತಾ ಪದ ಹೇಳ್ತಾ ಇಡು ಕಾಲು
ಲೋಕದೊಳಗೆ ಏನೈತೋ ಇದಕು ಮೇಲು
ದೊರೆ ಇಚ್ಛೆ ಶಿವನಿಚ್ಛೆ ಎನುತ ಬಾಳು.

ಲೆಫ್ಟ್ ರೈಟ್ ಲೆಫ್ಟ್ ರೈಟ್ ಎನು ಗೆಣೆಯಾ
ಕಾಳೆಗಕ್ಕೆ ಮನ ಮಾಡಿ ಮರೆ ಮನೆಯಾ !

# ದಾರಿಯಲ್ಲಿ

ಭೂತ ಭವಿಷ್ಯಗಳನಂತ ತಮದ
ನಡುವೊಳು ಬೆಳಗುವ ಮಾನವ ಮನದ
ಸೇತುವೆ ದಾರಿಯೊಳಿತ್ತಣಿನತ್ತ
ಸುಳಿದಾಡುವ ಎಲೆ ಭಾವದ ವೊತ್ತ,
ಪಯಣವೆತ್ತ ನಿಲ್ದಾಣವದೆಲ್ಲಿ ?
ಮುಂಬರಿಯದೆ ತಳುಗುಸಿರೇಕಿಲ್ಲಿ ?
ನುಡಿಬಡವಂ ಕವಿ ; ಇಲ್ಲೇನರಕೆ ?
ಎನ್ನಿಂ ಸಲ್ಲುವುದೇ ನಿಮ್ಮರಕೆ !

ಸಟ್ಟಿರುಳೊಳು ನಿದ್ದೆಯನೊತ್ತಿಟ್ಟು
ಹಿರಿದಲಗನು ಹೆಗಲಿನ ಮೇಲಿಟ್ಟು
ಹೆಬ್ಬಾಗಿಲ ಮುಂಗಡೆ ನಡೆದಾಡಿ
ಹೆಜ್ಜೆಯನೆಣಿಸುವ ಯಂತ್ರದ ಮೋಡಿ,
ಎಲೆ ಸೀಪಾಯಿ, ನಿನ್ನೀ ಭ್ರಮಣೆ
ಪ್ರತಿಯಂತೆಸಗುವ ಪರಿಚಂಕ್ರಮಣೆ—
ಆವ ಹರಕೆಗೆ ಆವ ಸಲಿಕೆಗೆ ?
ಆರ ಭಯಕು ನಿನ್ನಾಸೆಗು ಸಲಿಗೆ ?
ಆವ ಬಯಕೆಯೀ ಭ್ರಮಣೆಯ ಮೂಲ ?
ನೀನಾವಿಚ್ಛೆಯ ಭೂತದ ಬಾಲ ?

ಗ್ರೀಷ್ಮದ ರವಿ ಹಾದಿಯ ಸುಡುತಿರಲು
ಜಂಗಮವೆಲ್ಲವು ನಡೆಯುಡುಗಿರಲು
ವಟವಟ ಗುಟ್ಟುವುದುರಿಬಿಸಿಲೆಸಲು
ಉಕ್ಕಿನ ಗಾಡಿಯು ಕಟಕಟ ಕಿರಲು
ಹೇಸರ ಕತ್ತೆಗು ಕಠೋರವಾಗೆ
ಸದ್ದಡಗಲು ಸುಡುಧೂಳಿನ ಕಡೆಗೆ

## ದಾರಿಯಲ್ಲಿ

ಗಾಡಿಯ ನಡೆಬಿಡುವೆಲೆ ಸಾರಥಿಯೆ,
ಸಂಸಾರದ ಹಠಯೋಗದ ಯತಿಯೆ,
ಈಗ ನೀನು ತಣಿವಾಂತವನಂತೆ
ಕಂಗಳ ಮುಚ್ಚಿಹೆ, ತುಸ ನಗುವಂತೆ
ತುಟಿಗಳ ತೆರೆದಿಹೆ ಸುಖಿಯಾದಂತೆ.
ಹಿಂಜರಿವುದೆನ್ನ ಕರುಣೆಯಹಂತೆ
ನಿನ್ನೀ ನಗುವಿನ ಬೆರಗನು ನೋಡಿ;
ಬಿಸಿಲು ಬಾಡುವುದು ನಾಚಿಕೆಗೂಡಿ.
ನಿನ್ನೀ ಯೋಗಕೆ ನಾನೇಸೂರೆವೆ
ಎಂತೀ ನಗೆಯುಚ್ಚರಿಯನು ಮರೆವೆ!

ಹೋ ಹೋ ಏನಿದು ಗಜಬಜವಿಲ್ಲಿ?
ಹುಡುಗರ ಗೇಲಿಯು ಭಿಕಾರಿಯಲ್ಲಿ!
ಡಬ್ಬದ ಕಸಗಳ ಬೆದಕುತ್ತಿಹಳು
ಬಣ್ಣದ ಚಿಂದಿಯು ಹುಡುಕುತ್ತಿಹಳು
ಹಸುರಿನ ಹಳದಿಯು ಕಪ್ಪಿನ ಕೆಂಪಿನ
ಸೆರಗಿನ ಸರಿಗೆಯು ದೋತರದಂಚಿನ
ರೇಶಿಮೆ ಚೂರುಗಳಿನಿತಿನಿತಾಯ್ದು
ಮುತ್ತುವ ಹುಡುಗರ ಸುತ್ತಲು ಬೈದು
ನಡೆವಳು ಅಂಗಡಿ ಜಗಲಿಯ ಕಡೆಗೆ
ತನ್ನೆಳಮುದ್ದನು ಕುಳಿತಿರುವೆಡೆಗೆ.
ಮೂಗಿನ ಸಿಂಬಳ ಕಣ್ಣಿನ ಜಿಬುರು
ಈ ಕೊಳೆಮೊದ್ದಗೆ ಹೇಸದರಾರು?
ತಲೆಗೇನೀ ಸಿಂಗರದ ಕುಲಾವಿ
ಮಿರು ಜರತಾರಿಯ ಕಳೆಯುಂ ತೀವಿ!
ಜನನಿಯ ನೇಹವೆ ಹೊಗರಿಟ್ಟಂತೆ
ಮಾತೆಯ ಕನಸೇ ಚಿಗುರಿಟ್ಟಂತೆ
ನೋಡಿರಿ ನೇಹಿಗರೇ ಆ ಕೂಸ
ದೊರೆಗೂ ಒಪ್ಪದು ಮಣಿಯುಷ್ಣೀಷ!

ಆ ಕರಿಮುದ್ದನ ಕಂಕುಳೊಳೆತ್ತಿ
ಚಪ್ಪಳೆ ಕೈಗಳ ಕಂಗಳಿಗೊತ್ತಿ
ಹಿಗ್ಗೊಳು ನಡೆವಳು ಆ ಕಡುಬಡವೆ
ತಂಟೆಯ ಮಾಡುವ ಹುಡುಗರ ನಡುವೆ.
ದೊರೆಕುವರನಲಾ ಪೇಳಿರಿ ಇವನು
ಎನುವಂತಿರಲಾ ದೃಷ್ಟಿಯ ಹವಣು,
ದೊರೆಕುವರನಲ್ಲವೆನ್ನುವರಾರು ?
ಈ ಸನ್ನಿಯನೀ ಜಗಕ್ಕೆ ಸಾರು
ಎನ್ನುವಳಿಂದಿಗು ನೆನಪೊಳಗಾಕೆ
ಅವಳಾ ಭಾವಕೆ ಈ ನುಡಿ ಸಾಕೆ ?

" ನೋಡು ನೋಡು ನಾನೊಂದವತಾರ,
ದರಿದ್ರನಾರಾಯಣನ ಕುಮಾರ;
ಕುಂತಿಯು ಕರ್ಣನ ಬಿಸುಟಂತೆನ್ನ
ಸಿರಿ ಹಡೆಯುತ ಬಿಸುಟಳು ತಿಳಿಯಣ್ಣ.
ನಿನ್ನಯ ಜಾಸಕೆ ತಕ್ಕವ ನಾನು
ನಿಟ್ಟಿಸು ಪರಮ ರಹಸ್ಯವ ಕಾಣು ! "
ಕೋಣನ ತಿನ್ನುವ ಮಾರಿಗಳುಂಟು
ನರಬಲಿಗೆಳಸುವ ದೇವತೆಯುಂಟು
ಶಿಶುಗಳ ಹಿಸುಕುವ ಕಾಮುಗಳುಂಟು
ಕರುಳನು ತಿರಿಚುವ ಭೀಮುಗಳುಂಟು
ಇವುಗಳ ಕಂಡರು ಅಂಜದರುಂಟು—
ಈತನ ನೋಡಲು ಬೇಕೆದೆ ಎಂಟು.
ನೋಟವೆ ಇಲ್ಲದ ಬಿರುಬಿರು ದಿಟ್ಟಿ
ಸೋಳ್ಪುದು ನನ್ನನು ದುರುದುರುಗುಟ್ಟಿ.
ಮಾತೇ ಇಲ್ಲದೆ ಕಟ್ಟಿದ ಬಾಯಿ
ಬೇಡುವುದೇನನೊ ದೇಹಿ ದೇಹಿ.
ನಿಶ್ಚಲವಾಗಿವೆ ಅಂಗಗಳೆಲ್ಲಾ
ಒಂದರೊಳೂ ತುಸವೂಣೆಯವಿಲ್ಲ.

ದಾರಿಯಲ್ಲಿ

ಎರೆಯದೆ ನಿಂತಿವೆ ಕೈಯೆದೆ ಮೇಲೆ
ಯಾರೇನಂ ಕೊಡಬಲ್ಲರೆನುವೊಲೆ.
ಎಲ್ಲಾ ಬೇಡಿಕೆಗೂ ತವರಿವನು
ಏನನ್ನೂ ಬೇಡದೆ ಕುಳಿತಿಹನು.
ಜಾಡ್ಯಕ್ಕೆಲ್ಲಕೂ ಮನೆಯಂತಿಹನು
ಪರಿಕಿಸಿ ನೋಡೆ ನಿರಾಮಯನಿವನು.
ಇವನೇ ವಿರಾಗಿಯಾಗಿರುವಾಸೆ
ಉತ್ಸವಗೊಂಡಿಹ ಪೂರ್ಣನಿರಾಸೆ.
ಎಲ್ಲರ ಕರುಣೆಗು ಮಿಕ್ಕವನಿವನು
ಭಯಕೂ ಭಕ್ತಿಗು ತಕ್ಕವನಿವನು !
ಎಲೆ ಅತಿಮಾನುಷ ಮರೆಯಾಗೊಳಗೆ
ಸ್ವಸ್ತಿ ಎಂದು ಈ ಸುಡಿಗುಡಿಯೊಳಗೆ.

ಎಲೆ ಕರುಣೆಯೆ, ನೀನೆಷ್ಟು ತೆರದೊಳು
ತಿರಿಯುತಿರುವೆಯೋ ನನ್ನ ಬಗೆಯೊಳು !
ಎಲೆಲೇ ಆಸೆಯೆ, ಎಲೆಲೇ ಭಯುವೇ,
ಆತ್ಮವ ನುಂಗುವ ಎಲೆ ಅನುಸಯುವೇ,
ಭೋಗದ ಜೇನೊಳು ಮುಲುಗುವ ಸಿರಿಯೇ,
'ಲಿಯುರ'ಂದದಿ ಮೊರೆಯಿಡುತಿಹ ಬರಿಯೇ,
ಬಿಡು ಎನ್ನದೆ ಕೊಡು ಎನ್ನುವ ಗೋಳೇ,
ಇಹವೇ ಕೊನೆ ಎಂದೆನ್ನುವ ಬಾಳೇ,
ತಪವನು ಗೈಯದೆ ತಾಪವ ಪಡುವರೆ,
ವ್ರತವೆಸಗದೆ ಉಪವಾಸವಿರುವರೇ,
ಬಯಕೆಯೊಳೇ ಬಾಳಂ ಕರಗಿಪರೇ,
ಇಟ್ಟಂತೆಯೆ ಕಡೆವರೆಗಿರುವವರೇ,
ಇನ್ನೇಗತಿ ಎನ್ನುವ ವೇದಂಗಳೆ,
ನಮ್ಮದೆ ಮತಿ ಎನ್ನುವ ಭೇದಂಗಳೆ,
ತಿರುಕರ ಬಾಯಾಳಾಗಿಹ ಸ್ಮೃತಿಗಳೆ,
ಭಾರತದೊಳೆ ಬಾಯಾರಿಹ ಋಷಿಗಳೆ,

ಪರರಿಚ್ಛೆಯ ಕರುಳಿನ ಹೊರಳಿಯೊಳೇ
ಜೀರ್ಣಿಸಿ ಹೋಗುತ್ತಿಹ ಧರ್ಮಗಳೇ,
ದೇವರು ಥೂ ಎಂದೆಂಜಲು ಮಾಡಿ
ಬಿಸುಡಿದ ತೆರನಾಗಿಹ ಜನ್ಮಗಳೇ,

ಅಂದು-ಮುಂದು ಬಾಳಂಚಿನ ತಮದ
ನಡುವಂತರದೊಳು ಬೆಳಗುವ ಮನದ
ಸೇತುವೆ ದಾರಿಯೊಳಿತ್ತಣಿನತ್ತ
ಇಂತಲೆದಾಡುವ ಭಾವದ ಮೊತ್ತ,
ಮುಂಬರಿಯಿರಿ ಮುಂಬರಿಯಿರಿ ಬೇಗ
ತಾಳೆ ನೀವು ಮನಮುತ್ತುವ ವೇಗ.
ತೀರಿತಿಂದು ಸನ್ನೀ ಸುಡಿಜಿಕ್ಕೆ
ಹರಸಿ ಹೋಗಿ ಸನ್ನಿಂ ಮುಂದಕ್ಕೆ.

# ಸಾಂತ್ವ ವಚನ

ಅಳಬೇಡ ಅಳಬೇಡ ನನ್ನಾತ್ಮವೇ—
ನೀನತ್ತರೇನು ಫಲ
ವ್ಯರ್ಥವೈ ನಿನ್ನ ಛಲ
ಅಳುವುದೇ ನಿನ್ನ ಬಲವಾಯಿತೇಕೋ
ಅಳಬೇಡ ಅಳಬೇಡ ನನ್ನಾತ್ಮವೇ.

ಬಗೆಬಗೆಯ ತಿನಿಸುಗಳ ತಿನ್ನು ನಾಲಗೆ ತಣಿಯೆ,
ಅನ್ನಪಾನಗಳುದರ ತುಂಬುವಷ್ಟಿವೆಕೋ,
ನೆರೆಯವರು ಕರುಬುವಂತುಡಿಗೆತೊಡಿಗೆಗಳಿವೆ ಕೊ
ನಿನ್ನ ಸತಿಸುತರೆಲ್ಲ ಸಕ್ಕ ನಲಿವಂತೆ.

ದಿನದಂತೆ ದಿನವಿಹುದು ಇರುಳಂತೆ ಇರುಳಹುದು
ಇಂದಿನಂದದಿ ನಾಳೆ ಎಂದಿನಂತಯ್ಯ
ಸೃಷ್ಟಿಯಿಂತೀ ತೆರದಿ ನಿನಗಾಗಿ ಸಮತೆಯಿಂ
ನಡೆಯುತಿರಲೇಕೆ ನೀ ರೋದಿಸುವೆಯಿಂತು?

ನಿನ್ನೆಲ್ಲ ಕಾಮಗಳ ಕೆರಳಿಸಲು ತಣಿಸಲೂ
ಪರಕೀಯ ವಸ್ತುಚಯವಿಹುವೆಟುಕುವಂತೆ
ಚಲನ ಚಿತ್ರದ ತಾರೆ ತಳುಕಿನೊಳು ನಗುತಿಹಳು
ಕೋವಿದರು ಹಾಡುತಿಹರಯ್ಯ ನಿನಗೆಂದೆ.

ನಿನ್ನ ಮತಿಯುದ್ದೀಪ್ತಿಗವರಿವರ ಕೃತಿಗಳಿಕೊ
ನಿನ್ನನನುರಂಜಿಸಲು ನಿನ್ನ ಗೆಯ್ಮೆಯಿವೆ,
ನಿನ್ನ ನಗೆಯುಕ್ಕಿಸಲು ನಿನ್ನ ಜನತೆಯೆ ಇದಿಕೊ
ನಿನ್ನಿಚ್ಛೆಗಳ ಸಲಿಸಲಲ್ಪಕಾಮರಿಕೊ.

ಜಗದೆಲ್ಲ ಕರ್ಮಗಳ ಫಲವಿನಿಸು ನಿನಗಾಗೆ
ಹಣ್ಣಿನೊಳು ಹುಳುವಂತೆ ಹದುಳದಿಂದಿರದೆ
ನನ್ನಂತರಾತ್ಮವೇ ರುಜೆಯಡಸಿದೆಳೆಯನೊಲು
ಆವಗಂ ಕುಸುಕುಸನೆ ರೋದಿಸುವೆಯೇಕೆ ?

"ಹೀನದೀನರು ಎಂದು ಹಮ್ಮಿಲ್ಲದವರೆಂದು
ಹಿಂದುಮುಂದಿಲ್ಲದಿಹ ಕುಲಹೀನರೆಂದು
ಸೋತವರು ಜೀತಕ್ಕೆ ತಕ್ಕರೆ"ನ್ನುವ ನಿಂದೆ
ನಿನ್ನನುಳಿದನ್ಯರಿಗೊ—ನಿನಗಲ್ಲ, ಜಾಣ!

ಆಳುವರು ಆಳಲಿ ಬಾಳುವರು ಬಾಳಲಿ
ಬೇಳ್ವವರು ಬಾಳುವೆಯ ಬೇಳುತ್ತಲಿರಲಿ
ಪರರಸೂಯಾಗ್ನಿಯೊಳು, ನಿನಗೆ ಸೆಕೆ ತಟ್ಟದೊಲು
ಸ್ವಾರ್ಥವನು ಹೊದ್ದಿರಿದೊ—ಅಳಬೇಡವಯ್ಯ.

ಏನು ಗೈಯಲಿ ನಾನು, ಏ ಮದ್ದನುಣಿಸಲಿ
ಆವ ರುಜೆಯಡಸಿಹುದೊ ಕಾಣೆನಮ್ಮಯ್ಯ
"ಅಮ್ಮ ನಾಡೇ" ಎಂದು "ಅಮ್ಮ ನಾಡೇ" ಎಂದು
ಸತತವಳುವೆನ್ನಾತ್ಮ ಹಗುರಪ್ಪುದೆಂದೋ ?

ಅಳಬೇಡ ನನ್ನಿನಿಯ, ಅಳಬೇಡ ನನ್ನೊಲವೆ
ಅಳಬೇಡವೋ ಹಗೆಯೆ, ನನ್ನೊಡಲ ದಗೆಯೇ
ನೀನಳಿಯಬಾರದೇ ಎಂದು ಶಪಿಸುವೆ ನಾನು
ಅಳಬೇಡವೆನ್ನಯ್ಯ, ನನ್ನೊಳಗಿನೊಳಗೇ.

# ಮುನಿದ ಭಾರತವನ್ನು ಕುರಿತು

ಗ್ರೀಕರ ಪುರಾಣದೊಳು ದೇವೇಂದ್ರ ಜ್ಯುಪಿತರಸು
ಪಾತಕವ ಗೈದ ತನ್ನಣುಗನಿಗೆ ಈ ತೆರದ
ಯಾತನೆಯ ವಿಧಿಸಿದ್ದನೇವೇಳ್ವೆ—ನಾಲಗೆಗೆ
ಸೋಕುವೊಲು ಜೋಲುತಿರೆ ತನಿರಸದ ಹಣ್ಗೊಂಪೆ,
ಇವನ ಹಸಿವಿವನನೇ ತಿನ್ನುತಿದೆ ; ಬಳಿಯೊಳೇ
ಜುಳಜುಳನೆ ತುಂತುರನು ಸಿಂಪಿಸುತ ಹರಿಯುತಿರೆ
ತಿಳಿವೊನಲು, ಪ್ರಾಣವನೆ ಹೀರುತಿದೆ ನೀರಡಿಕೆ ;—
ಇವು ನಿಲುಕಿ ನಿಲುಕದೊಲು ಶಾಪ ಕಟ್ಟಿದೆ ಇವನ.

ಅಂದಿನೀ ಕತೆಪಾಡೆ ದಿಟವಾಗೆ, ಭಾರತವೆ,
ಆವ ಪಾತಕಕಾಗಿ ನಿನ್ನ ಮಕ್ಕಳನಿಂತು
ಹೇವವಿಲ್ಲದ ಹೀನದೀನತೆಯ ಶಾಪದೊಳು
ಬಂಧಿಸಿಹೆ ನಿನ್ನ ವಿಪುಳೈಶ್ವರ್ಯವೆರವಾಗೆ ?

ಶುಷ್ಕಾತ್ಮರಾತರ್ಾಂತರಂಗರಾವೆಮ್ಮ ನೋಡು ;
ಕಾರ್ಪಣ್ಯಶಾಪವನು ತೆಗೆದು ಋದ್ಧಿಯನು ನೀಡು.

# ಮೈಸೂರು ವಿಶ್ವವಿದ್ಯಾನಿಲಯವನ್ನು ಕುರಿತು

ತಿರೆಯ ಭಾರವ ಹೊತ್ತು ಬಳಲಿರುವ ಫಣಿ ತನ್ನ
ಹೆಡೆಯೊಂದರೊಳು ಎದ್ದು ಉಳಿದುದರೊಳಾಲಸ್ಯ-
ವಡೆವಂತೆ, ಹೆರರ ಸಿರಿಬಾಳ್ತನದ ಭಾರವನು
ಶಿರದಿ ಪೊತ್ತೀ ಜನತೆ ತನ್ನ ಮಿಕ್ಕಂಗದೊಳು
ಪ್ರಾಣಮಾತ್ರಳೆ ಆಗಿ ಜ್ಞಾನಜಡತೆಯ ಪಡೆದು
ಇಲ್ಲಿ ಈ ದೇಗುಲದ ಸರಸತಿಯ ಕೃಪೆಯಿಂದ
ಬಲ್ಲತನವಾಂತಿಹಳು ತನ್ನೊಂದು ಮುಖದೊಳಗೆ—
ತಾನಿಹೆನು, ತನ್ನಳಲು ಹಿರಿದು, ಹೊಣೆ ಹಿರಿದೆಂದು.

ಸಿದ್ಧಿಯಿಂದೆಚ್ಚರವೆ ಮಿಗಿಲಾತ್ಮಸುಸ್ಥಿತಿಗೆ.
ಈ ಧರ್ಮವನು ತಿಳಿದು ಬಾಳುವರ ನಡೆ ನುಡಿಯ
ಮಧ್ಯಪೀಠದೊಳಿಟ್ಟು ಪೂಜೆ ಸಲಿಪೆವು ರೂಢ-
ವಿದ್ಯೆಗಳ ಪ್ರಾಕಾರ ಕಟ್ಟುತೀ ದೇಗುಲದಿ!

ಇಂದಿಂತು. ಮುಂದೆಂತೊ? ಇಂದಾಗಲಿಂತೆ ಹರಕೆ
ಜಡವಳಿದು ನಾಡು ಬದುಕಲಿ ಎಂದೆ ಎಲ್ಲರೆರಕೆ.

# ನವಭಾರತ ತರುಣರಾವು

೧

ನವಭಾರತ ತರುಣರಾವು
ನವಭಾರತ ತರುಣರು
ನವಭಾರತ ತರುಣರೆಂಬ
ಇನ್ನಾರಿಗೂ ಇಂಥ ಜಂಬ!
ನವಭಾರತದಣುಗರಾವು
ನವಭಾರತದಣುಗರು.

ಮುನಿದಳೀಕೆ ಹಿರಿಯರಿಗೆ
ಮುನಿಯುಳೀಕೆ ಕಿರಿಯರಿಗೆ
ಮಮತೆಯಿಂದಲೆದೆಹಾಲ
ಎರೆಯುತ ಪೊರೆವಳು ಬಾಳ
ಇನ್ನಾಯ್ತೆಮಗೀ ಸ್ವಾಸ್ಥ್ಯ
ಇದ ತಪ್ಪಿಸಲಾರನನ್ಯ
ನವಭಾರತದಣುಗರಾವು
ನವಭಾರತದಣುಗರು.

೨

ಮರೆಯೊಳೀಕೆಯೆರೆದ ಶುಭದ
ಹರಕೆಯಲ್ಲೆ ಮೊಳೆತೆವು,
ಸೆರೆಯೊಳೀಕೆ ಗಳಿಸಿ ಕೊಟ್ಟ
ಬಯಕೆಯಲ್ಲೆ ಬಲಿತೆವು,
ಸುಯಿಲ ಸೆಕೆಗೆ ಮಾಗಿದೆವು,
ಭಯದ ಹುಳಿಯ ನೀಗಿದೆವು,
ಜಯ ಭಾರತಮಾತೆಗೆಂದು

ಘೋಷಿಸಿ ತಲೆಬಾಗಿಹೆವು,
ನವಭಾರತದಣುಗರಾವು
    ನವಭಾರತದಣುಗರು.

೩

ಹಂಗಿಲ್ಲದೆ ತಲೆಯನೆತ್ತಿ
    ಸಿಂಗದಂತೆ ನಡೆವೆವು,
ಇದಿರಿನೆಡರ ಮಲೆಯ ಹತ್ತಿ
    ಮುದಗೊಂಡೇ ನಿಲುವೆವು,
ಹಿಂದ ನೋಡಿ ಬಗೆಗೆಡೆವು,
ಮುಂದ ನೋಡಿ ಎದೆಗೆಡೆವು,
ಇಂದಿಹೆವಿಂದಿಹೆವೆಂಬಾ-
ನಂದವೊಂದೆ ಎದೆ ತುಂಬ.
    ನವಭಾರತದಣುಗರಾವು . . .

೪

ಹಿರಿಯರಂದು ಭಂಗಪಡಲು
    ನಾವೇತಕೆ ನೊರಗೋಣ,
ಅವರ ಪಾಡು ಅವರಿಗಾಯ್ತು
    ಅವರ್ಗಿಗು ತುಸ ಮರುಗೋಣ,
ಅವರ ತಪ್ಪೆ ನಮಗೆ ನೆಪ್ಪೆ,
ನಮ್ಮ ವಿಧಿಯ ಹುಡುಕೋಣ,
ದುಡುಕಬೇಕೆ ದುಡುಕೋಣ,
ತುಡುಕಬೇಕೆ ತುಡುಕೋಣ ;
ಸಿರಿಬಾಳೇ ನಮ್ಮ ಗುರಿ,
ನಿಯತಿಯಿಂದಲದ ಕೊಸರಿ-
ಕೊಳ್ವುದೆ ನಮಗಿಂದು ಸರಿ.
    ನವಭಾರತದಣುಗರಾವು . . .

೫

ನೂರುಕೋಟಿ ದೇವರಂತೆ
ನಮಗೇತಕೊ ಇವರ ಚಿಂತೆ?
ನಮ್ಮ ತೋಳ ಬಲದೊಳವರ-
ನಳೆವುದಕೆಯೆ ನಮ್ಮ ಬವರ?
ಅವರಾಯುಧವವರಿಗುಂಟು,
ಕಳಕೆ ಹತ್ತು ದೆಸೆಗಳುಂಟು.
ಶರಣು ಶರಣುಸಂತರೇ,
ಶರಣು ಶರಣು ಸಂತರೇ,
ನಮ್ಮ ಬಿಡಿರಿ ದಮ್ಮಯ್ಯ,
ಬಯಲಿಗೋಡಿ ನಮ್ಮಯ್ಯ,
ನಿಮ್ಮ ಹಮ್ಮು ನಿಮಗಿರಲಿ,
ನಮ್ಮ ದಮ್ಮು ನಮಗಿರಲಿ,
ನಿಮಗೆ ನಿಮ್ಮ ಪೋರಿಕೆ,
ಇದೇ ನಮ್ಮ ಕೋರಿಕೆ.
  ನವಭಾರತದಣುಗರಾವು . . .

೬

ಹೇಳಿ ನೀವು ಹಿರಿಯರೇ
ನಮ್ಮನಾಡಿನೆರೆಯರೇ,
ನಮ್ಮ ಮೋಹವಾಗಬೇಕೆ
  ಪರರ ದಾಹಕೆ?
ನಮ್ಮ ಲೋಭವಾಗಬೇಕೆ
  ಪರರ ಲಾಭಕೆ?
ನಮ್ಮ ಭೇದವಾಗಬೇಕೆ
  ಪರರ ಮೋದಕೆ,
ನಮ್ಮ ಭೋಗವಾಗಬೇಕೆ
  ಪರರ ಯೋಗಕೆ,
ನಮ್ಮ ಮನದ ಹೊಲಸಿವೆಲ್ಲ
  ಆಗಬೇಕೆ ಗೊಬ್ಬರ

ಪರರ ಸಿರಿಗೆ, ಉಳಿಯಬೇಕೆ
ನಮಗೆ ಹಸಿವಿಸುಬ್ಬರ ?
ಇನ್ನು ಮೇಲೆ ಇಂತಲ್ಲ,
ಕೇಳಿರಮ್ಮ ಈ ಸೊಲ್ಲ.
ನಮ್ಮ ಕೋಪತಾಪವೆಲ್ಲ
ನಮ್ಮನಿನ್ನು ದಹಿಸವು,
ನಮ್ಮ ರಾಗಭೋಗವೆಲ್ಲ
ಹೆರರ ಸಿರಿಯು ವಹಿಸವು,
ನಮ್ಮ ಕರುಬಿಸುರುಬಿಗಿನ್ನು
ನಮ್ಮ ಮಮತೆ ಹಿಂಗದು,
ಸ್ವಾರ್ಥದಲ್ಲಿ ಸುಳಿಯು ಸುತ್ತಿ
ನಮ್ಮ ವೇಗ ತಂಗದು.
ನಮ್ಮ ಮೈಯು ಸೋತಿಲ್ಲ,
ನಮ್ಮ ಮನವು ಜೋತಿಲ್ಲ,
ಭೇದವೊಂದು ನಮಗಿಲ್ಲ,
ಖೇದದ ಮಾತೇ ಇಲ್ಲ,
ನಮ್ಮರಿಷಡ್ವರ್ಗಗಳೆಲ್ಲ
ನಮಗೆ ಆಳು, ಅರಸಲ್ಲ ;
ನಮ್ಮ ಮತಿಗೆ ಧೃತಿಯುಂಟು,
ನಮ್ಮ ಧೃತಿಗು ಮತಿಯುಂಟು.
ನವಭಾರತದಣುಗರಾವು . . .

೭

ಹಿರಿಯ ಬಾಳೆ ನಮ್ಮ ಗುರಿ,
ಸಿರಿಯ ಬಾಳೆ ನಮಗೆ ಸರಿ,
ಎಲ್ಲಿರಲದು ಎಂತಿರಲಿ,
ಮುಗಿಲ ಮೇಲೆ ನಿಂತಿರಲಿ,
ಏಳು ಕಡಲ ಮುಂಚಿರಲಿ,
ಅಥವ ಇಲ್ಲೆ ಹೊಂಚಿರಲಿ,

ಅದು ಕೈಮೇಲ್ಕೈತರಲಿ
ಎಂಬಾತುರ ನಮಗಿರಲಿ,
ನವಭಾರತ ತರುಣರಾವು . . .

೮

ಮುಗಿಲ ತೆರೆದು ನಾಡಿಗೊಲಿದು
ದೇವಗಂಗೆ ಬರುವಂತೆ,
ನಿಂತು ಕೊಳೆತು ನಾರ‍್ವ ಜಲಕೆ
ಹೊಸ ಬಾಳನು ತರುವಂತೆ,
ಹೊಲಸ ಕೊಚ್ಚಿ ಹರಿವಂತೆ,
ಭೋರ‍್ಗರೆಯುತ ಕರೆವಂತೆ,
ನೂರ‍್ಕೊರಲೊಳು ಪೆಂಪ ಸೊಂಪ
ಇದುವೆ ಸ್ವರ್ಗವೆನೆ ನಿಳಿಂಪ,
ಇಂದಿಳಿತಂದಿಹುದು ಶಕ್ತಿ,
ನೆರೆಗೊಂಡಿದೆ ನಾಡ ಭಕ್ತಿ,
ಸಿದ್ಧಿಸಿಹುದು ದೈಸ್ಯಮುಕ್ತಿ,
ಹುರುಪೊಳಿಹುದು ಕ್ರಿಯಾಸಕ್ತಿ.

ಮೈಯಳಿದರು ಮನವುಳಿವುದು
ಎಂಬ ಗಾದೆ ಲೇಸಾಗೆ,
ನೀರು ಗಾಳಿ ಬೆಂಕಿಯೊಂದು
ಇವರ ದೃಢವ ಕೆಡಿಸದೆಂದು
ಲೋಕವೆಲ್ಲ ಬೆರಗಾಗೆ,
ಎಡರನೆಲ್ಲ ಹಾರುವೆವು,
ಸಿರಿಕಡಲನೆ ಸಾರುವೆವು,
ಹೆಮ್ಮೆಯ ಬಾಳೆಮ್ಮ ಗುರಿ
ನಿಯತಿಯಿಂದಲದ ಕೊಸರಿ-
ಕೊಳ್ಳುವದೆ ನಮಗಿಂದು ಸರಿ.
ನವಭಾರತ ತರುಣರಾವು
ನವಭಾರತ ತರುಣರು.

# ಪಯಣಿಗರ ಹಾಡು

ಗುಡಿಯಾಚೆ ಗಡಿಯಾಚೆ ಗಿಡದಾಚೆಗೆ
ಹೋಗೋಣ ಬನ್ನಿರೋ ಹೊಸ ನಾಡಿಗೆ.
    ಹೊಚ್ಚ ಹೊಸ ನೋಟಕ್ಕೆ
    ಅಚ್ಚ ಬಾಳಾಟಕ್ಕ
ನೆಚ್ಚುಗೆಯ ಕೆಳೆಯರೇ ಹೊಸ ನಾಡಿಗೆ.

ಸೆರೆಗೊಂಡ ಹೊಸಲಂತೆ ಭೋರಿಡಲಿ ರಸ್ತೆ,
ಸಾಲುಮರ ಬಿದ್ದೆದ್ದು ದೌಡಿಡಲಿ ಮತ್ತೆ,
ರೈಲ್‌ಬಂಡಿ ಮೋಟಾರುಬಸ್ಸು ಹರಿಗೋಲು,
ನಾಡಾಗಲೆಮಗೊಂದು ತೂಗುವುಯ್ಯಾಲು.

ಹುರುಡುಗಟ್ಟುತ ನಮ್ಮ ಜತೆಗೋಡಿ ಬರುವ
ಗುಡ್ಡಗಳ ಹಿಂದಿಟ್ಟು ನಾವೆಲ್ಲ ನಗುವ,
ನಮ್ಮ ವೇಗದಿ ಸಾಗಿ ಮುಗಿಲು ರವಿ ಎಲ್ಲಾ
ಒಕ್ಕೊಟಕ್ಕೈತರಲಿ ದಿಕ್ಕುದೆಸೆ ಎಲ್ಲಾ.

ಹಚ್ಚ ಹೊಲ ಹುಚ್ಚೆಳ್ಳು ತೆನೆ ಜೋಳ ನೆಲ್ಲು
ಒಂಟಿಮರಗಳ ಸುತ್ತ ರಾಸವೆಲ್ಲೆಲ್ಲೂ ;
ಬಾಳೆ ಕೈಬೀಸುತ್ತ ಕರೆವ ಕಣ್ಸೈಪು
ಗರಿಯಲಗ ಝಳಪಿಸುವ ಈಚಲಿನ ಕಾಪು.

ಬೆರಗು ನೋಟದ ಹಳ್ಳಿಮಂದಿಗಳ ಕೂಟ,
ಬೆಡಗಿನುಡುಪಿನ ಹೊಳಲ ಹೆಣ್ಣುಗಳ ನೋಟ,
ಹೊಳೆ-ಹಳುವು-ಗುಡಿ ಎಂದು ಹರಿವ ಕಣ್ಣೋಟ,
ಅಡಿಗಡಿಗು ಅಹ ಎಂದು ಅಚ್ಚರಿಸುವಾಟ !

## ಪಯಣಿಗರ ಹಾಡು

ಇಂದು ಯಾದವಗಿರಿ ನಾಳೆ ಹಳೆಬೀಡು,
ಮುಂದೆ ಜಗದಚ್ಚರಿ ಗೊಮ್ಮಟನ ಮೋಡು ;
ಕಡಲು ಕರೆಯಲು ಹಿರಿಯ ಕಮರಿಯನೆ ಸೆಗೆವ
ಪ್ರಣಯರುದ್ರೆಯು ಕಂಡು ಸೋಜಿಗವ ಪಡುವ.

ಕಿವಿ ತಣಿಯೆ ಮೊರೆಯುವ, ಕಣ್ತಣಿಯೆ ಕುಣಿವ,
ಮುಪ್ಪಿಲ್ಲವೆನೆ ಹರಳು-ನೀರೊಳು ಹೊಳೆವ,
ಮರ್ತ್ಯಗಂಗನಂತದ ಆಸೆ ಮಿಗಲೆಂದೋ
ಕರುಣಿಸಿ ಬಾನ್‌ಕವಿವ ಕಡಲ ತಡಿ ಮುಂದು.

ಗಿರಿಯಾಚೆ ಗಡಿಯಾಚೆ ಗಿಡದಾಚೆಗೆ
ಹೋಗೋಣ ಬನ್ನಿರೋ ಹೊಸ ಸೀಮೆಗೆ
ಹೊಚ್ಚಹೊಸ ನೋಟಕ್ಕೆ
ಅಚ್ಚ ಬಾಳಾಟಕ್ಕೆ
ನೆಚ್ಚಿನಾ ನೇಹಿಗರೆ ಹೊಸ ಸೀಮೆಗೆ !

# ಹೊಸ ಹಾಡು

೧

ಗಳಿಗೆ ಗಳಿಗೆಗೂ ಹೊಸ ಹೊಸ ರೀತಿಗೆ
ಈ ಜಗವೋಡುತಿದೆ—
ಹಳತ ನೋಡಿ ತಾ ಕಿಲಕಿಲ ನಗುತಲಿ
ಓ ಜಗವೋಡುತಿದೆ.

ದಿನದಿನ ಯುಗಯುಗ ಮನುಮನ್ವಂತರ
ಮಾಡಿದುದನೆ ತಾ ಮಾಡುತ್ತ,
ಒಂದೆ ಹಾಡು ಓ ಒಂದೆ ಸೋಬಾನೆ
ಹಾಡಿದುದನೆ ತಾ ಹಾಡುತ್ತ,
ಕಣ್ಣು ಕಪಾಟಿನ ರಥಾಶ್ವದಂದದಲಿ
ಒಂದೇ ಹಾದಿಯು ಹಂಬಲವಾಗಿ
ನಡೆದೀ ಲೋಕವು ಆವ ಶಕ್ತಿಗೋ
ಇಂದು ತಾನು ಬಲು ಬಲು ಮರುಳಾಗಿ,
ಓಡುತಿದೆ ಅಹ ಓಡುತಿದೆ!
ಹಳತ ನೋಡಿ ತಾ ಕಿಲಕಿಲ ನಗುತಲಿ
ಈ ಜಗವೋಡುತಿದೆ.

೨

ಅಜ್ಞಾನಕೆ ವಿಜ್ಞಾನದ ಹೊಸ ಬೆಳಕು,
ನಿಂತ ಮನಕೆ ಹೊಸ ಮತಗಳ ಚುರುಕು,
ಊಹೆಯನೇ ಮುಂಚುವ ಹೊಸ ಸೃಷ್ಟಿ,
ಹೊಸ ಬಾಳಿಗೆ ಹೊಂಚುವ ಹೊಸ ದೃಷ್ಟಿ—
ಕವಿಗಾಯಿತು ನವ ಹರ್ಷಕ್ರಾಂತಿ,
ಕಲೆಗಾಯಿತು ಹೊಸ ಚೆಲುವಿನ ಕಾಂತಿ

## ಹೊಸ ಹಾಡು

ಚಿತ್ರಕೆ ಹೊಸ ರಂಗು
ಹಾಡಿಗು ಹೊಸ ಗುಂಗು !

ಗಳಿಗೆ ಗಳಿಗೆಗೂ ಹೊಸ ಹೊಸ ರೀತಿಗ
ಈ ಜಗವೋಡುತಿದೆ—
ಪ್ರಗತಿಯ ಹಂತಕೊ
ಪ್ರಲಯ ದುರಂತಕೊ
ಹಳತ ನೋಡಿ ತಾ ಕಿಲಕಿಲ ನಗುತಲಿ
ಓ ಜಗವೋಡುತಿದೆ.

# ಕರಿಮುಗಿಲಿನ ಹಾಡು

ಕರಿಮುಗಿಲೇ, ಸಿರಿಮುಗಿಲೇ,
ಎಲ್ಲಿಂ ತಂದೆಯೊ ಇಂಥ ಮಳೆ,
ಇಂದ್ರನ ಮುರಿದೇ ವರುಣನ ಸುಲಿದೇ
ಎಲ್ಲಿಂ ತಂದೆಯೊ ಕಾರ ಮಳೆ?

ಆವ ಮಾಟಗಳಿಂದ ನೀನು
ಏನೇನುಪಾಯ ಹೂಡಿ
ಸೂರ್ಯನ ಮುಸುಕಿ ಕಡಲನು ಹಿಸುಕಿ
ಗಾಳಿಯ ಗೆಳೆತನ ಮಾಡಿ?

ಆರ ಮಿಂಚಿನ ಪೆಟಿಗೆ ಮುರಿದು
ಗುಡುಗುಟ್ಟಾಡುತ್ತಿರುವೆ,
ಹೊರಲಾರದೆ ಹೊತ್ತಿಂತು ತಂದ
ಕೊಳ್ಳೆಯನಿಲ್ಲಿಯೆ ಸುರಿವೆ?

ಎಳೆಯರ ಕತೆಯ ಕಳ್ಳನಂತೆ
ನೀನೂ ಸೈ ಸೈ ಚದುರ—
ಬಲವಂತರ ಸಿರಿ ಸುಲಿಯುವ ಸಾಹಸಿ
ನೀನೆಮಗಾದೆಯೊ ಸದರ.

ಕಾರ ಕರಾಳ ದೂರದಿ ಬರೆ ನೀ
ಕಣ್ಣಿಗೆ ಬಲು ಬಲು ಚೆನ್ನ
ಮಳೆಯಂಬೋಟಿಗೆ ಮುಪ್ಪಿಗು ಸಾವಿಗು
ತಿರೆ ಬಿಟ್ಟೋಡುವ ಬನ್ನ.

ಕರಿಮುಗಿಲಿನ ಹಾಡು

ನೀ ಮೈದಡಹುತ ದಡದಡ ನಡೆಯಲು
ತರುಗಿಡವೆಲ್ಲಕು ಪುಳಕ
ನಾಡೇ ಜಳಜಳ ನಗುವುದು ನಮ್ಮೀ
ಮುದಿಮಲೆಗಾಗಲು ಜಳಕ.

ಮಳೆಮುಗಿಲೇ, ಬೆಳೆಮುಗಿಲೇ,
ಎಲ್ಲಿಂ ತಂದೆಯೊ ಇಂಥ ಮಳೆ,
ತಂದೆಯ ತೆರದೊಳು ತಂದುದ ತೆರುತ
ಹಾಯಾಗುವ ನಿನಗೆಂಥ ಕಳೆ!

# ಬೆಳುದಿಂಗಳ ಹಾಡು

ಒಲಿದಿಹೆ ನಾ ಬೆಳುದಿಂಗಳಿಗೆ
ಮಂಗಳವಾಯ್ತಿಹ ಕಂಗಳಿಗೆ !

ಮಲಗಿಹ ಸೂರ್‍ಯನ ಸವಿಗನಸು
ಇದು ಕಾರಿರುಳಿನ ಸಲ್‌ಮನಸು.
ಬಿಸಿಯೇ ಇಲ್ಲದ ಈ ಬೆಳಕು
ಗರಳಕೊರಳನಾವನ ತಳುಕು ?

ಜಗವನು ತೋರುವ ಸೋಗಿದಕೆ
ಏನನೆಂಬೆನೀ ಸೋಜಿಗಕೆ !
ಕವಿಗಳ ಮಾತೊಳು ಹುರುಳೆನಿತು
ಇದಕೂ ತೋರುವ ಮರುಳಿನಿತು.

ಚಂದಕ್ಕಿ ಮಾಮನ ತನಿ ಬೆಳಕೆ,
ಬಾ ಬೆಳುದಿಂಗಳೆ ಅಂಗಳಕೆ.
ನೀ ಬೆಳಗುವುದೇ ಬಲು ಚೆಂದ
ನೀನಿಹುದೇ ನಮಗಾನಂದ.

ಪಿಸುಮಾತೊಳು ತಿರೆಗೇನೊರೆವೆ ?—
“ಅಮ್ಮಯ್ಯ ನೀ ಬಲು ಚೆಲುವೆ”
“ಕೇಳುವರೇನೆಂಬರು !—ಸದ್ದು !”
ಸಿಮ್ಮೀ ಮಾತಿದು ಬಲುಮುದ್ದು.

ಬೆಳುದಿಂಗಳೆ ನೀ ಕಲೆಗಾರ,
ನೀ ತರುಪೀ ಭ್ರಮೆ ಸುಕುಮಾರ.
ಬೆಣ್ಣೆಗಿಂತ ಮೆದುವಿದಿರ ಮಲೆ
ನಾಗಲೋಕದಂತಾಯಿತಿಳೆ.

## ಬೆಳುದಿಂಗಳ ಹಾಡು

ಮಿಂಚುವುದೆಂತಹ ಈ ಬಳ್ಳಿ
ಕಲ್ಪಲತೆಯನೇ ಹಿಂತಳ್ಳಿ.
ನಿತ್ಯದ ರೂಢಿಯ ಮನೆಯ ಸತಿ
ಎಂತು ಕಾಂಬಳಿಂದೆನಗೆ ರತಿ !

ಬೆಳುದಿಂಗಳೆ, ದೇವರ ವರವೆ,
ನೀ ತರುವೀ ಸೊಗಕೇನೊರೆವೆ !
ನೀ ಮದ್ದೆಲ್ಲರ ಬೇಸರಕೆ
ಕೊಳ್ಳಣ್ಣಾ ಈ ನುಡಿಹರಕೆ.

ಒಲಿದಿಹೆ ನಾ ಬೆಳುದಿಂಗಳಿಗೆ
ಮಂಗಳವಾಯ್ತುಹ ಕಂಗಳಿಗೆ.

# ನನ್ನ ಹಾಡುಗಳನ್ನು ಕೇಳಿ

ಬಣ್ಣಬಣ್ಣದ ಸುಡಿಯ ಗರಿಗಳನು ಮಿಂಚಿಸುತ
ತಾನತಾನಕು ಹೊಯ್ದು ರಾಗಗಳ ರೆಕ್ಕೆಯನು
ಮೌನದಾಗಸವನ್ನೆ ಹಾರುವೀ ಗೀತಂಗ-
ಳಿನ್ನವೇನಣ್ಣ—ಈ ರಸದ ದಾರಿಗವಕ್ಕಿ ?

ಮಾಧವನ ಬೆಂಬತ್ತಿದೀ ಲೋಕಸಂಚಾರಿ
ಬೇವಸದ ಪರಿಹಾರಕಾಸರೆಯನರಸುತ್ತ
ಈ ವನದೊಳೀ ಮರನ ಕಂಡೆರಗಿ, ತುಸ ತಂಗಿ,
ಆದ ಸಂತಸಕಾಗಿ ಹಾಡಿ ರೆಕ್ಕೆಯ ಬಿಚ್ಚಿ

ಮರಳಿ ಮುಗಿಲನೆ ಸಾರ್ವುಪವು ಸನ್ನವೆಸೆ ನಾಚಿ-
ಕೊಳುತೆನ್ನ ಮನ ಮುದುರೆ, ತಲೆ ತಗ್ಗಿ, ಎದೆ ಮುಗಿಯೆ
ಹಳಿದು ಮೂಕರಿಸುತಿವೆ—ಆದೊಡೀ ದಸಿಗೇಳಿ
ಆರನಿದ್ದೆಯೊಳಗಿದ್ದವೆಚ್ಚರಂಗೊಳ್ಳುತಿವೆ !

ಅಕ್ಕೊ ಅಹ ಮತ್ತೊಂದು ದೆಸೆಯಿಂದ ಹಿಂಡು ಹಿಂಡು
ತಂಗಲಿಲ್ಲಿಗೆಯೆ ಬರುತಲಿವೆ ಬಂಧುಗಳ ಕಂಡು !

# ಬಾ ಕನ್ನಡ ನಾಡಿನ ವಾಣಿ

(ಮೇಲುಕೋಟೆಯ ಕನ್ನಡ ಸಂಘದ ಪ್ರಥಮ ವಾರ್ಷಿಕೋತ್ಸವದ
ಅಂಗವಾಗಿ ರಚಿಸಿದ ಸ್ವಾಗತ ಗೀತೆ.)

ಓ ಭಾರತೀ
ವಿಶ್ವಾತ್ಮಸ್ವಾಂತ ಸಂಭವೆ,
ಸಕಲ ಚೇತನಾರಾಧನ ದೈವವೆ,
ಓ ವಾಗಧಿದೇವಿ,
ಓ ಗಿರಿ ವನ ಕಂದರ ನಿರ್ಝರ ಮರ್ಮರ
ಖಗಮೃಗ ಕೂಜನ ನಾದ ಶರೀರೆ,
ಸುಮನೋ ವಿಹಾರೆ, ಜ್ಞಾನ ಮಂದಿರೆ, ಸುಂದರಿ,
ಬಾ ಈ ಸಭೆಗೋವಿ.

ಓ ಪುರಾಣಕವಿವಚಃ ಪ್ರಭಾವ ಲಲಿತೆ,
ನವ ಕಾವ್ಯೋದ್ಗಮ ಯೌವನಲಸಿತೆ,
ಓ ತೇಜಸ್ವಿನಿ, ರಾಣಿ,
ಓ ರಸ ಭರ ಕವಿತಾ ಪಯೋದ ದರ್ಶನ
ಮುದಿತ ರಸಿಕ ಹೃನ್ಮಯೂರ ವಾಹನೆ,
ಸನಾತನೆ, ನಿತ್ಯನೂತನೆ, ಸೂಕ್ತಿಜೀವನೆ, ಪಾವನೆ,
ಓವೋ ಚಾರು ಗತಿ ಗೀತ ವೀಣಾ ನಿಕ್ವಣೆ,
ಬಾ ಕನ್ನಡ ನಾಡಿನ ವಾಣಿ.

ಓ ಮೃದುಳ ಮನೋಹರ ಭಾವ ವಿಲಾಸೆ,
ಮಂಗಳಮತಿ ಶ್ರೀನಿವಾಸ ಹಾಸೆ,
ಓ ಕರಲಾಲಿತ ಬಹು ಕವಿ ಶಾರಿಕೆ,
ಅಂಬಿಕಾತನಯದತ್ತ ತಾರಕೆ,
ಓವೋ ಜನನೀ,
ಆನಂದ ಸ್ತನ್ಯ ದಾಯಿನೀ,
ಆತ್ಮಪೋಷಿಣೀ, ಪಾರ ದರ್ಶಿನೀ,
ಓ ಶುಭಕರೆ, ಕಲ್ಯಾಣೀ,
ದಯಗೈ ಕನ್ನಡ ವಾಣೀ.

# ಶರಣು

ದುರ್ದಿನದೊಳು ಮರೆಯಾಗುವ ರವಿಯಂತೆ
ನಿರ್ಬಲ ಜನ ಕಡೆಗೈದಿಹ ಪವಿಯಂತೆ,
ಗದ್ದಲದೊಳು ಸಿರಿ ಬಾನಿನ ಮೌನದೊಲು,
ಎದೆ ಕಿವುಡಿಗೆ ಬಗೆ ಕುರುಡಿಗೆ ಕಾಣದೊಲು,
ಇಂದಿರುತಿಹ ತಾಯ್ನಾಡಿನ ತೇಜಗಳೆ,
ಮುಂಗಾಣುವ ಸೌಭಾಗ್ಯದ ಬೀಜಗಳೆ,
ಕೈಮುಗಿವೆನು ನಿಮಗೆ.

ಗರಳವನೋಕರಿಸುತ್ತಿರುವೀ ಲೋಕದ
ಎದೆಯಾಳದಿ ಸೆಲೆಯಾಗಿಹ ಶಿವದಮೃತದ
ಕಳಶದ ತೆರ ಮರೆಯಾಗಿಹ ಚೇತನರೇ
ಶುಭವೆನ್ನುವೆ ನಿಮಗೆ.

ಘೂರ್ಣಿಸುವತಿಯಾಸೆಗಡಲ ಬಡಬಾನಲ,
ಅಜ್ಞಾನ ವಿಮೂರ್ಛಿತಾತ್ಮ ಪ್ರಾಣಾನಿಲ,
ಘೋರ ಭಯದಿ ದೆಸೆಗೆಟ್ಟರ ತಾರಾಬಲ,
ನಮಗೆಂದಿಗು ನೀವಾಗಿರಿ ಬಳಿಬೆಂಬಲ,
ಶರಣು ನಿಮಗೆ—ಮಂಗಳ ಮಂಗಳ.

# ಮೊದಲ ಚರಣಗಳ ಅಕಾರಾದಿ

---

# ಪು. ತಿ. ನರಸಿಂಹಾಚಾರ್ಯರ ಕೃತಿಗಳು

## ಹಣತೆ (ಕವನಸಂಗ್ರಹ)

. . . ಇವರ ಕಾವ್ಯವೋ ಹೊಸ ಸಾಹಿತ್ಯದ ಅತ್ಯುತ್ತಮ ಕೃತಿಯಲ್ಲಿ ಸೇರತಕ್ಕದ್ದಾಗಿದೆ. . . . ಇಲ್ಲಿ ಕಾಣುವುದು ಕಾಳಿದಾಸ ವರ್ಡ್ಸ್‌ವರ್ತ್ ಕವಿಗಳು ಜೊತೆಯಾಗಿ ತಿದ್ದಿದ ಕವಿ ಮನೋಧರ್ಮ.

—ಶ್ರೀ ಶ್ರೀನಿವಾಸರ ಮುನ್ನುಡಿಯಿಂದ.

ಶ್ರೀಮಾನ್ ನರಸಿಂಹಾಚಾರ್ಯರ ಕವನಗಳಲ್ಲಿ ಅವನ್ನು ಓದಿದಷ್ಟೂ ಹೆಚ್ಚು ಬೆಲೆಯೂ ಅರ್ಥವೂ ಸ್ವಾರಸ್ಯವೂ ಕಂಡುಬರುತ್ತವೆ. . . . ಈ ಕವನಗಳಲ್ಲಿ ಅಮೋಘವಾದ ಜೀವನಾನುಭವವೂ ಆ ಅನುಭವಕ್ಕೆ ಕಾವ್ಯರೂಪವನ್ನು ಕೊಡುವ ಶಕ್ತಿಯೂ ತೋರಿಬರುತ್ತವೆ.

—ಪ್ರಬುದ್ಧ ಕರ್ಣಾಟಕ.

## ಮಾಂದಳಿರು (ಕವನಸಂಗ್ರಹ)

ಪ್ರಕೃತಿಸೌಂದರ್ಯವನ್ನು ಹೇಗೋ, ಹಾಗೆಯೇ ಮಾನವಜನ್ಮದ ರಹಸ್ಯವನ್ನೂ ಇವರು ಮರೆಯಲಾಗದ ಮಾತುಗಳಲ್ಲಿ ಹೇಳಬಲ್ಲರು. . . . ಇವರ ಗೀತಗಳನ್ನೋದುವವರಿಗೆ ಚೇತನಾಚೇತನವೆಂಬ ಬಳಕೆಯ ಭೇದಭಾವನೆಯು, ಯೋಗಿಗಳಿಗೆ ಯೋಗಬಲದಿಂದಾಗುವಂತೆ, ತಾತ್ಕಾಲಿಕವಾಗಿ ವಿಗಳಿತವಾಗುವುದು. . . . ಆದರೆ ಪ್ರಕೃತಿಮಾನವರ ಸ್ವರೂಪವನ್ನು ಹೊರಪಡಿಸುವುದೇ ಈ ಗೀತೆಗಳ ಕಡೆಯ ಮಾತಲ್ಲ; ಅವುಗಳೆರಡಕ್ಕೂ ಅಂತರ್ಯಾಮಿಯಾಗಿ ಅವುಗಳನ್ನು ಮೀರಿರುವ ಅಪ್ರಮೇಯ ಮಹಿಮನಾದ ಪರಮೇಶ್ವರನನ್ನು ನಮ್ಮ ನೆನಪಿಗೆ ತರದೆ ಈ ಗೀತಗಳು ಪ್ರಾಯಿಕವಾಗಿ ವಿಶ್ರಾಂತವಾಗುವುದಿಲ್ಲ.

—ಶ್ರೀ ಎಂ. ಹಿರಿಯಣ್ಣನವರ ಮುನ್ನುಡಿಯಿಂದ.

## ರಾಮಾಚಾರಿಯ ನೆನಪು (ಭಾವನಾಚಿತ್ರಗಳು)

ಶ್ರೀಮಾನ್ ಪು. ತಿ. ನರಸಿಂಹಾಚಾರ್ಯರ ಬರವಣಿಗೆಯಲ್ಲಿ ಅವರದೇ ಆದ ಒಂದು ಉಕ್ತಿಶಕ್ತಿಯೂ, ನೋಟದ ಅಥವಾ ಅನುಭವದ ರೀತಿಯೂ ಇವೆ. ಗದ್ಯದಲ್ಲಿಯೂ ಹಾಗೇ, ಪದ್ಯದಲ್ಲಿಯೂ ಹಾಗೇ; . . .

ಕಿರಿದರಲ್ಲಿ ಹಿರಿದನ್ನು ಕಾಣಿಸುವ ಜಾಣತನವು—ಪಂಕ್ತಿಪಾದಗಳ ಒಂದೊಂದು ಮಾತಿಗೂ ಭಾವವನ್ನೂ ಅರ್ಥವನ್ನೂ ಹಾಯಿಸಲೆಳಸಿ ಅವನ್ನು ತಿಳ್ಳದಂತೆ ಕಡೆಯುವ ಕೆಲಸವು—ಇವರ ಕೃತಿಗಳಲ್ಲೆಲ್ಲಾ ಕಾಣಬರುವುದು.

—ಪ್ರಬುದ್ಧ ಕರ್ಣಾಟಕ.

## ಅಹಲ್ಯೆ (ಗೀತರೂಪಕ)

ಇದರಲ್ಲಿ ಹಿನ್ನೆಲೆ ಮುನ್ನೆಲೆಯೆಂಬ ಭೇದವಿಲ್ಲದೆ, ಪ್ರಕೃತಿಯೊಂದಿಗೆ ಪಾತ್ರಗಳೂ ಪಾತ್ರಗಳೊಂದಿಗೆ ಪ್ರಕೃತಿಯೂ ಸನಾತನವಾಗಿ ಎದೆ ಮಿಡಿಯುವುದನ್ನು ನೋಡಬಹುದು. ಈ ನಾಟಕದ ಉದ್ದಕ್ಕೂ ಬರುವ ವರ್ಣನೆಗಳಂತೂ ಉಜ್ವಲಪ್ರತಿಭೆಯಿಂದಲ್ಲದೆ ಹೊಮ್ಮುವುದು ಅಸಂಭವ. . . . ಇನ್ನು ಅವಿರತವಾಗಿ ಗೋಚರಿಸುವ ನಾಟಕಕಾರರ ಸೂಕ್ಷ್ಮದೃಷ್ಟಿ, ಧ್ವನಿಪೂರ್ಣವಾಗಿ ಮಾತುಗಳನ್ನೂ ಸಂಗತಿಗಳನ್ನೂ ಜೋಡಿಸುವ ಶಕ್ತಿ, ಛಂದಸ್ಸಿನಲ್ಲಿ ಬಗೆಬಗೆಯ ಪ್ರಯೋಗಗಳನ್ನು ನಡಸಿ ಹೊಸ ಸೊಗಸುಗಳನ್ನು ಹಲವೆಡೆಗಳಲ್ಲಿ ಸಾಧಿಸಿರುವ ಕೌಶಲ— . . .

— ಶ್ರೀ ತೀ. ನಂ. ಶ್ರೀಕಂಠಯ್ಯನವರ ಮುನ್ನುಡಿಯಿಂದ.